KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೧, ೨೦೦೭ (ಫಾಲ್ಗುಣ ೧೦, ಶಕ ವರ್ಷ ೧೯೨೮) | ಸಂಚಿಕೆ ೯ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವೈ.ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಸೇವೆಯಿಂದ ವಯೋ ನಿವೃತ್ತಿ ಹೊಂದಿದ ಅಧಿಕಾರಿಗಳಿಗೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:–**

1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 74 ಎಸ್ಇಎನ್ 2002 ದಿನಾಂಕ:07.04.2004.

2 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 74 ಎಸ್ಇಎನ್ 2002(1) ದಿನಾಂಕ:07.04.2004.

3 ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರ ದಿನಾಂಕ:09.11.2004 ಮತ್ತು 10.11.2004ರ ವಿಚಾರಣಾ ವರದಿ.

4 ನೋಟೀಸ್ ಕ್ರಮಾಂಕ ಸಿಆಸುಇ 74 ಎಸ್ಇಎನ್ 2002 ದಿನಾಂಕ:06.12.2004.

5 ಶ್ರೀ ವೈ.ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಲಿಖಿತ ಉತ್ತರ ಸಲ್ಲಿಸಿರುವುದಿಲ್ಲ.

6 ಡಾ:ಕೆ.ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ ಅವರ ಉತ್ತರ ದಿನಾಂಕ:08.01.2005.

7 ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು, ಜಿಲ್ಲಾ ಆರೋಗ್ಯ ಮತ್ತು ಕುಟುಂ ಕಲ್ಯಾಣ ಅಧಿಕಾರಿಗಳ ಕಛೇರಿ ಅವರ ಉತ್ತರ ದಿ:17.01.2005.

8 ಸರ್ಕಾರದ ಪತ್ರ ಸಂಖ್ಯೆ:ಸಿಆಸುಇ 74 ಎಸ್ಇಎನ್ 2002 ದಿನಾಂಕ:18.04.2005, 23.08.2005 ಮತ್ತು 13.03.2006.

9 ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಅವರ ಪತ್ರ ಸಂಖ್ಯೆ:ಪಿಎಸ್ಸಿ 18 ಸಿಎನ್ಎಸ್ 05 ದಿ:23.05.2005, 24.10.2005 ಮತ್ತು 11.05.2006.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಅನುಮೋದಿಸಲ್ಪಟ್ಟ ಪಟ್ಟಿಯಲ್ಲಿ ಇಲ್ಲದ, ಇಲಾಖೆಗೆ ಉಪಯೋಗಕ್ಕೆ ಬಾರದ ಹಾಗೂ ಔಷಧವಲ್ಲದ ಂಟಿಬಿಡಿಥಿಟಚಿಣಜ ಚಿಟಿ ಖಿಡ-ಂಜಿಥಿಟಿಚಿಜ ಎಂಬ ರಾಸಾಯನಿಕವನ್ನು ಖರೀದಿಸುವ ಮೂಲಕ ಸರ್ಕಾರಕ್ಕೆ ಲಕ್ಷಾಂತರ ರೂಪಾಯಿಗಳ ನಷ್ಟ ಉಂಟು ಮಾಡಿ ತೀವ್ರ ದುರ್ನಡತೆ ಎಸಗಿದ ಆರೋಪಗಳಿಗಾಗಿ ಈ ಕೆಳಕಂಡ

ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ (1) ಮತ್ತು (2)ರಲ್ಲಿ ಓದಲಾದ ದಿ:07.04.04ರ ಸರ್ಕಾರಿ ಆದೇಶಗಳಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು:–

1. ಶ್ರೀ ವೈ.ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ.
2. ಡಾ:ಕೆ.ಸುಂದರಮ್ಮ, ನಿವೃತ್ತ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ.
3. ಶ್ರೀ ರವಿಕುಮಾರ್ ಕಮಲಾಪುರಕರ್, ನಿವೃತ್ತ ಮುಖ್ಯ ಲೆಕ್ಕಾಧಿಕಾರಿ.
4. ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕರು.
5. ಶ್ರೀ ವಿಶ್ವನಾಥ್, ಪ್ರಥಮ ದರ್ಜೆ ಸಹಾಯಕರು.
6. ಶ್ರೀ ಮಾಚಕಲ್ಲಪ್ಪ, ಪ್ರಥಮ ದರ್ಜೆ ಸಹಾಯಕರು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3)ರಲ್ಲಿ ಓದಲಾದ ದಿ:09.11.04 ಮತ್ತು 10.11.04ರಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಗಳನ್ನು ಪರಿಶೀಲಿಸಿಲಾಗಿ 6 ಮಂದಿ ಆರೋಪಿತರುಗಳ ಪೈಕಿ ಶ್ರೀ ವೈ.ಸದಾಶಿವ, ಡಾ:ಕೆ.ಸುಂದರಮ್ಮ, ಶ್ರೀ ಸೈಯದ್ ಸತ್ತಾರ್ ಮತ್ತು ಶ್ರೀ ರವಿಕುಮಾರ್ ಕಮಲಾಪುರಕರ್ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿವೆ ಹಾಗೂ ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ:–

> ಪ್ರತಿ ಅಧಿಕಾರಿ/ನೌಕರರಿಗೆ ಸಂಬಂಧಿಸಿದಂತೆ ಆರೋಪದಲ್ಲಿ ಸ್ವಲ್ಪ ಬದಲಾವಣೆ ಇದ್ದರೂ ಸಹ ಒಂದೇ ಹಿನ್ನೆಲೆ ಹೊಂದಿರುವುದರಿಂದ ಅದನ್ನು ಜಂಟಿಯಾಗಿ ಪರಿಗಣಿಸಿ ಆರೋಪಗಳ ಸಂಬಂಧವಾದ ಪ್ರತಿವಾದಗಳನ್ನು ಕೇಳಿ ಮಂಡನಾಧಿಕಾರಿಗಳು ಮಂಡಿಸಿರುವ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ಪಾರದರ್ಶಕ ನಿಯಮಗಳನ್ನು ಪಾಲಿಸದಿರುವುದು ಒಂದೇ ದಿನಾಂಕದಂದು ಅಧಿಕಾರಿಗಳ ಅಧಿಕಾರದ ಮಿತಿಯೊಳಗೆ ಬರುವಂತೆ ಖರೀಧಿ ಮೊತ್ತವನ್ನು ಒಂದು ಲಕ್ಷಕ್ಕೆ ಮಿತಿಗೊಳಿಸಿ ಹಲವಾರು ಆದೇಶಗಳನ್ನು ನೀಡಿರುವುದು, ಸರ್ಕಾರವು ಕಪ್ಪು ಪಟ್ಟಿಯಲ್ಲಿ ಸೇರಿಸಿರುವ ಸಂಸ್ಥೆಯಿಂದ ಆರೋಗ್ಯ ಸೇವೆಗಳ ಯೋಜನಾ ನಿರ್ದೇಶಕರ ಅನುಮೋದಿತ ಪಟ್ಟಿಯಲ್ಲಿಲ್ಲದ ರಾಸಾಯನಿಕಗಳನ್ನು ಖರೀಧಿಸಿರುವುದು ದೃಢಪಟ್ಟಿರುತ್ತದೆ ಎಂದು ನಿರ್ಣಯ ನೀಡಿರುತ್ತಾರೆ.

ಸೇವೆಯಲ್ಲಿರುವ ಆಪಾದಿತರುಗಳಾದ ಶ್ರೀ ರವಿಕುಮಾರ್ ಕಮಲಾಪುರಕರ್, ಶ್ರೀ ವಿಶ್ವನಾಥ್ ಮತ್ತು ಶ್ರೀ ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಅದರಂತೆ ಕ್ರಮ ಕೈಗೊಂಡು ದಿ:23.05.05ರಂದು ಆದೇಶ ಹೊರಡಿಸಲಾಗಿದೆ.

ಸೇವೆಯಿಂದ ವಯೋ ನಿವೃತ್ತಿ ಹೊಂದಿದ ಶ್ರೀ ವೈ.ಸದಾಶಿವ, ಡಾ:ಕೆ.ಸುಂದರಮ್ಮ, ಹಾಗೂ ಶ್ರೀ ಸೈಯದ್ ಸತ್ತಾರ್ ಅವರುಗಳಿಗೆ ವಿಚಾರಣಾ ವರದಿಯ ಪ್ರಕಾರ ಆರೋಪಗಳು ರುಜುವಾತಾಗಿರುವ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ಮೇಲೆ (4)ರಲ್ಲಿ ಓದಲಾದ ದಿ:06.12.04ರ 2ನೇ ನೋಟೀಸ್ ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ವೈ.ಸದಾಶಿವ, ಕೆಎಎಸ್ ಅಧಿಕಾರಿ ಅವರು ದಿ:06.12.04ರ 2ನೇ ನೋಟೀಸಿಗೆ ತಮ್ಮ ಲಿಖಿತ ಉತ್ತರವನ್ನು ಸಲ್ಲಿಸಿರುವುದಿಲ್ಲ. ಡಾ:ಕೆ.ಸುಂದರಮ್ಮ, ಅವರು ಮೇಲೆ (6)ರಲ್ಲಿ ಓದಲಾದ ದಿ:18.01.05ರಂದು ಉತ್ತರ ಸಲ್ಲಿಸಿ ಶಿಸ್ತು ಪ್ರಾಧಿಕಾರಿಯವರು ಪ್ರತ್ಯೇಕವಾದ 10 ಆರೋಪಗಳನ್ನು ಮಾಡಿದ್ದು, ವಿಚಾರಣಾಧಿಕಾರಿಯವರು ಇವುಗಳ ಬಗ್ಗೆ ಪ್ರತ್ಯೇಕವಾಗಿ ವಿಶ್ಲೇಷಣೆ ನಡೆಸದೆ ಎಲ್ಲಾ 10 ಆರೋಪಗಳನ್ನು ಸಂಯೋಜಿಸಿ ನಿರ್ಣಯ ನೀಡಿರುವುದರಿಂದ ವಿಚಾರಣಾ ವರದಿಯು ನಿಯಮಾನುಸಾರ ಇರುವುದಿಲ್ಲ, ವಿಚಾರಣಾ ವರದಿಯಲ್ಲಿ ಎಲ್ಲಾ 10 ಆರೋಪಗಳ ಬಗ್ಗೆ ಪ್ರತ್ಯೇಕವಾಗಿ ಸಾಕ್ಷ್ಯಾಧಾರಗಳ ವಿಶ್ಲೇಷಣೆ ಮಾಡಿರುವುದಿಲ್ಲ. ವಿಚಾರಣಾ ವರದಿಯು ನಿಯಮಗಳಿಗೆ ವ್ಯತಿರಿಕ್ತವಾಗಿದೆ. ತಾವು ಮಂಡಿಸಿರುವ ಅಂಶಗಳನ್ನು ವಿಚಾರಣಾಧಿಕಾರಿಯವರು ಪರಿಗಣಿಸಿರುವುದಿಲ್ಲ. ಸಾಕ್ಷಿದಾರರು ವಿಷಯದ ಬಗ್ಗೆ ಮಾಹಿತಿ ಹೊಂದಿರುವುದಿಲ್ಲ. 15 ವಿಧವಾದ ಔಷಧಿಗಳ ಹೊರತು ಬೇರೆ ಔಷಧಿಗಳನ್ನು ಖರೀದಿಸಬಾರದು ಎಂಬ ಬಗ್ಗೆ ಪ್ರತಿಬಂಧ ಇರುವುದಿಲ್ಲ, ಔಷಧಿಗೆ ಮುಖ ಬೆಲೆಯನ್ನೇ ನೀಡಿದ್ದು, ಹೆಚ್ಚಿನ ಮೊಬಲಗನ್ನು ನೀಡಿರುವುದಿಲ್ಲ. ಔಷಧಿ ಖರೀದಿ ಆದೇಶವನ್ನು ಜಿಲ್ಲಾ ಪಂಚಾಯಿತಿಯ ಶಿಕ್ಷಣ ಮತ್ತು ಸ್ಥಾಯಿ ಸಮಿತಿಯ ಅನುಮೋದನೆಯೊಂದಿಗೆ ಖರೀದಿಸಲಾಗಿದೆ. ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಮೊಬಲಗನ್ನು ವೆಚ್ಚ ಮಾಡಲಾಗಿದೆ. ತಾಲ್ಲೂಕು ವೈದ್ಯಾಧಿಕಾರಿಗಳು ಹಾಗೂ ಇತರೆ ಪರಿಣತರು ಔಷಧಿಗಳಿಗೆ ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ಪಾರದರ್ಶಕತೆ ಅಧಿನಿಯಮ 2000ನ್ನು ಪಾಲಿಸಲಾಗಿದೆ. ಕಛೇರಿಯ ಪತ್ರಾಂಕಿತ ಸಹಾಯಕರು ಮಂಡಿಸಿರುವ ಮಾಹಿತಿಗಳನ್ವಯ ಕ್ರಮ ಜರುಗಿಸಲಾಗಿದೆ. ಖರೀದಿಯ ಬಗ್ಗೆ ಸರ್ಕಾರದ ಅನುಮತಿ ಇರುವುದರಿಂದ ಯಾವುದೇ ದುರ್ನಡತೆ ಆಗದೇ ಇದ್ದು, ಸದ್ಭಾವನೆಯಿಂದ ತೆಗೆದುಕೊಂಡ ಕ್ರಮಗಳು ದುರ್ನಡತೆ ಆಗುವುದಿಲ್ಲವಾದ್ದರಿಂದ ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ತಿರಸ್ಕರಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಶ್ರೀ ಸೈಯದ್ ಸತ್ತಾರ್ ಅವರು ನೋಟೀಸಿಗೆ ಮೇಲೆ (7)ರಲ್ಲಿ ಓದಲಾದ ದಿ:17.01.05ರಂದು ಉತ್ತರ ಸಲ್ಲಿಸಿ, ವಿಚಾರಣಾ ವರದಿಯು ನಿಯಮಾನುಸಾರ ಇರುವುದಿಲ್ಲ. ವಿಚಾರಣಾಧಿಕಾರಿಯವರು ತಮಗೆ ವಕೀಲರ ಸಹಾಯ ಪಡೆಯಲು ಅನುಮತಿ ನೀಡಿರುವುದಿಲ್ಲ. ಸರ್ಕಾರಿ ನೌಕರರ ಸೇವೆಯನ್ನು ಪಡೆಯುವಂತೆ ತಿಳಿಸಿರುವುದು ಸರಿ ಇರುವುದಿಲ್ಲ, ಆರೋಪಗಳನ್ನು ಪ್ರತ್ಯೇಕವಾಗಿ ವಿಚಾರಣೆ ಮಾಡಿರುವುದಿಲ್ಲ.

ವಿಚಾರಣಾಧಿಕಾರಿಗಳು ಪ್ರಸ್ತಾಪಿಸಿರುವ ಅಂಶಗಳು ಆಧಾರ ರಹಿತ ಅಂಶಗಳಾಗಿರುತ್ತವೆ. ಹೀಗಾಗಿ ವಿಚಾರಣಾಧಿಕಾರಿಗಳ ನಿರ್ಣಯವು ಏಕಪಕ್ಷೀಯವಾಗಿರುತ್ತದೆ. ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ತೆಗೆದುಕೊಂಡ ನಿರ್ಣಯದನ್ವಯ ಔಷಧಿಗಳನ್ನು ಖರೀದಿಸಲಾಗಿರುತ್ತದೆ. ಂಟಭಿಡಿಥಿಟಚಿಣಜ ಂ ಛಿಡಿ-ಚಿಜಙಛಿತಜ ಇದನ್ನು ಖರೀದಿಸುವ ಪೂರ್ವದಲ್ಲಿ ಶಿಕ್ಷಣ ಹಾಗೂ ಆರೋಗ್ಯ ಸ್ಥಾಯಿ ಸಮಿತಿಯಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಅನುದಾನದ ಬಗ್ಗೆ ಆರ್ಥಿಕ ಇಲಾಖೆಯಿಂದ ಅನುಮೋದನೆ ಪಡೆಯಲಾಗಿದೆ. ಆಡಳಿತಾತ್ಮಕ ಅನುಮತಿ ದೊರೆತ ನಂತರ ಔಷಧಿಯನ್ನು ಖರೀದಿಸಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಯಾವುದೇ ನಷ್ಟ ಉಂಟು ಮಾಡಿರುವುದಿಲ್ಲ. ಖರೀದಿಸಿರುವ ಔಷಧಿಗಳನ್ನು ಸಾರ್ವಜನಿಕರಿಗೆ ಬಳಸಲಾಗಿರುತ್ತದೆ. ಇದರಿಂದಾಗಿ ತಾವು 34 ವರ್ಷಗಳ ಸುದೀರ್ಘ ಸರ್ಕಾರಿ ಸೇವೆಯಲ್ಲಿ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದ್ದು, ಅನ್ಯಾಯ, ಅಕ್ರಮಕ್ಕೆ ಅವಕಾಶ ಕೊಡದಂತೆ ಕಾರ್ಯನಿರ್ವಹಿಸಿರುವುದಾಗಿ ತಿಳಿಸಿ ನಿಯಮಾನುಸಾರ ವಿಚಾರಣೆ ನಡೆಸದೇ ನೀಡಿರುವ ವಿಚಾರಣಾ ವರದಿಯನ್ನು ತಿರಸ್ಕರಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಪ್ರಕರಣವನ್ನು ದಾಖಲೆಗಳೊಂದಿಗೆ ಮತ್ತೊಮ್ಮೆ ಪರಿಶೀಲಿಸಲಾಗಿದ್ದು, ಮೇಲ್ಕಂಡ ನಿವೃತ್ತ ಅಧಿಕಾರಿಗಳ ಉತ್ತರಗಳಲ್ಲಿ ಮನಗಾಣುವಂತಹ ಅಂಶಗಳು ಇಲ್ಲದೇ ಇರುವುದರಿಂದ ಅವರ ವಿರುದ್ಧ ಮಾಡಲಾದ ಆರೋಪದ ತೀವ್ರತೆಯನ್ನು ಮನಗಂಡು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ವಯ ಶ್ರೀ ವೈ.ಸದಾಶಿವ, ಡಾ.ಕೆ.ಸುಂದರಮ್ಮ ಅವರುಗಳ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ.500/-ಗಳನ್ನು 3 ವರ್ಷದ ಅವಧಿಗೆ ಹಾಗೂ ಶ್ರೀ ಸೈಯದ್ ಸತ್ತಾರ್ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ.300/-ಗಳನ್ನು 3 ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಲು ಸರ್ಕಾರವು ಉದ್ದೇಶಿಸಿ ಈ ಪ್ರಸ್ತಾವನೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 213ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗವು ದಿ:11.05.06ರ ತಮ್ಮ ಪತ್ರದಲ್ಲಿ, ಆಪಾದಿತರುಗಳು ಕಾನೂನುಬಾಹಿರ ಕ್ರಿಯೆಗಳನ್ನು ಮಾಡಿ ಸರ್ಕಾರಕ್ಕೆ ರೂ.18.82 ಲಕ್ಷದಷ್ಟು ನಷ್ಟವಾಗಿರುವುದಕ್ಕೆ ಕಾರಣರಾಗಿರುತ್ತಾರೆ. ಈ ಮೊತ್ತ ಕಾನೂನುಬಾಹಿರವಾಗಿ ಖರ್ಚಾಗಿರುವ ಬಗ್ಗೆ ಆಪಾದಿತರುಗಳು ಅಲ್ಲಗಳೆದಿರುವುದಿಲ್ಲ. ಮೊತ್ತ ಖರ್ಚಾಗಿರುವುದನ್ನು ಒಪ್ಪಿ ಅದು ಕಾನೂನುಬಾಹಿರವಾಗಿರುವುದಿಲ್ಲ ಎಂಬುದರ ಬಗ್ಗೆ ಮಾತ್ರ ಆಪಾದಿತರುಗಳು ತಮ್ಮ ಅಹವಾಲುಗಳನ್ನು ಹೇಳಿಕೊಂಡಿರುತ್ತಾರೆ. ದಂಡನೆಯ ತೀಕ್ಷ್ಣತೆಯನ್ನು ಕಡಿಮೆ ಮಾಡಿದ ಮಾತ್ರಕ್ಕೆ ಆಪಾದಿತರ ಮೇಲೆ ಇದ್ದ ಆಪಾದನೆ ಸುಳ್ಳಾಗುವುದಿಲ್ಲ. ಅವರಿಗೆ ದಂಡನೆ ನೀಡುವಲ್ಲಿ ಸರ್ಕಾರಕ್ಕೆ ಆದ ನಷ್ಟದಲ್ಲಿ ಅವರ ಪಾಲಿನ ನಷ್ಟದ ಮೊತ್ತವನ್ನು ವಸೂಲಿ ಮಾಡುವ ಯಾವುದೇ ಕ್ರಮ ತೆಗೆದುಕೊಂಡಿಲ್ಲವಾದ್ದರಿಂದ ಶ್ರೀ ವೈ. ಸದಾಶಿವ, ಡಾ. ಕೆ. ಸುಂದರಮ್ಮ, ಶ್ರೀ ಸೈಯದ್ ಸತ್ತಾರ್ ವರುಗಳಿಂದ ಸರ್ಕಾರಕ್ಕೆ ಆಗಿರುವ ನಷ್ಟದ ಮೊತ್ತ ರೂ. 18.82 ಲಕ್ಷದ ಪೈಕಿ ಅವರ ಪಾಲಿನ ನಷ್ಟ ಮೊತ್ತವನ್ನು ಬಡ್ಡಿ ಸಮೇತ ವಸೂಲಿ ಮಾಡುವುದಲ್ಲದೆ ಅವರುಗಳ ಮಾಸಿಕ ವಿಶ್ರಾಂತಿ ವೇತನದಿಂದ ರೂ.1,000/-ಗಳನ್ನು 5 ವರ್ಷದ ಅವಧಿಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸುರಂತೆ ಅಭಿಪ್ರಾಯ ನೀಡಿರುತ್ತದೆ.

ಶ್ರೀ ರವಿಕುಮಾರ್ ಕಮಲಪುರಕರ್, ಶ್ರೀ ವಿಶ್ವನಾಥ್ ಮತ್ತು ಮಾಚಕಲ್ಲಪ್ಪ ಅವರುಗಳಿಗೆ ಸಂಬಂಧಿಸಿದ ಆಥಿಕ ನಷ್ಟವನ್ನು ವಸೂಲಿ ಮಾಡಲು ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 26ನ್ವಯ ಪರಾಮರ್ಶಿಸದೇ ಕೈಗೆತ್ತಿಕೊಂಡು ಅವರುಗಳಿಂದ ವಸೂಲಿ ಮಾಡಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ.

ಕರ್ನಾಟಕ ಲೋಕ ಸೇವಾ ಆಯೋಗವು ನೀಡಿರುವ ಅಭಿಪ್ರಾಯವನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿನ ಆರೋಪಗಳ ಗಂಭೀರತೆಯನ್ನು ಪರಿಗಣಿಸಿ ಈ ಪ್ರಕರಣದಿಂದ ಆದ ಆರ್ಥಿಕ ನಷ್ಟ ರೂ.18.82 ಲಕ್ಷಗಳನ್ನು ಎಲ್ಲಾ ಆಪಾದಿತರುಗಳಾದ ಶ್ರೀ ವೈ. ಸದಾಶಿವ, ಡಾ:ಕೆ.ಸುಂದರಮ್ಮ, ಶ್ರೀ ರವಿಕುಮಾರ್ ಕಮಲಾಪುರಕರ್, ಶ್ರೀ ಸೈಯದ್ ಸತ್ತಾರ್, ಶ್ರೀ ಮಾಚಕಲ್ಲಪ್ಪ ಮತ್ತು ಶ್ರೀ ವಿಶ್ವನಾಥ್ ಅವರುಗಳಿಂದ ವಸೂಲಿ ಮಾಡುವಾಗ ಬಡ್ಡಿ ರಹಿತವಾಗಿ ವಸೂಲಿ ಮಾಡಬೇಕೆಂಬ ಒಂದೇ ಒಂದು ರಿಯಾಯಿತಿ ನೀಡಿ ಕರ್ನಾಟಕ ಲೋಕ ಸೇವಾ ಆಯೋಗದ ಪ್ರಸ್ತಾವನೆಯನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 74 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 23ನೇ ಜನವರಿ 2006**

ಪ್ರಸ್ತಾರನೆಯನ್ನು ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ಈ ಕೆಳಕಂಡ ಆರೋಪಿತರುಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡ ದಂಡನೆಯನ್ನು ವಿಧಿಸುತ್ತದೆ.

1) ಶ್ರೀ ವೈ. ಸದಾಶಿವ, ನಿವೃತ್ತ ಕೆಎಎಸ್ ಅಧಿಕಾರಿ ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ.18.82 ಲಕ್ಷಗಳ ಪೈಕಿ ಅವರ ಪಾಲಿನ ರೂ.3,13,666.67/-ಗಳನ್ನು ವಸೂಲಿ ಮಾಡುವುದು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.1000/-ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸಲು ಈ ಮೂಲಕ ಆದೇಶಿಸುತ್ತದೆ.

2) ಡಾ:ಕೆ. ಸುಂದರಮ್ಮ, ನಿವೃತ್ತ ಜಿಲ್ಲಾ ಮತ್ತು ಆರೋಗ್ಯ ಕುಟುಂಬ ಕಲಲ್ಯಾಣ ಅಧಿಕಾರಿ ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ.18.82 ಲಕ್ಷಗಳ ಪೈಕಿ ಅವರ ಪಾಲಿನ ರೂ.3,13,666.67/-ಗಳನ್ನು ವಸೂಲಿ ಮಾಡುವುದು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.1,000/-ಗಳನ್ನು ತಕ್ಷದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸಲು ಈ ಮೂಲಕ ಆದೇಶಿಸುತ್ತದೆ.

ಹಾಗೂ

3) ಶ್ರೀ ಸೈಯದ್ ಸತ್ತಾರ್, ನಿವೃತ್ತ ಪತ್ರಾಂಕಿತ ಸಹಾಯಕ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೀದರ್ ಅವರ ನಿವೃತ್ತಿ ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟ ರೂ.18.82 ಲಕ್ಷಗಳ ಪೈಕಿ ಅವರ ಪಾಲಿನ ರೂ.3,13,666.67/-ಗಳನ್ನು ವಸೂಲಿ ಮಾಡುವುದು ಹಾಗೂ ಅವರ ಮಾನಸಿಕ ವಿಶ್ರಾಂತಿ ವೇತನದಿಂದ ರೂ.1,000/-ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 5 ವರ್ಷಗಳ ಅವಧಿಗೆ ಕಡಿತಗೊಳಿಸಲು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

ಪಿ.ಆರ್. 236

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಪ್ರಾ:ವ:ಸಂ: ಮತ್ತು ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗೆ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ಬಾಹ್ಯಮೂಲದ ಮೂಲಕ ನೇಮಕಾತಿ ಮಾಡಿಕೊಳ್ಳುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಸಂಕಇ 95 ಕೆಎಂಯು 2004, ದಿನಾಂಕ 26.8.2004.
2) ಸರ್ಕಾರಿ ಆದೇಶ ಸಂಖ್ಯೆ ಸಂಕಇ 219 ಕೆಎಂಯು 2005, ದಿನಾಂಕ 29.10.2005.
3) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ:ಅಪ್ರಾಸಂಪ:ನೇಮಕಾತಿ: 2005-06 ದಿನಾಂಕ: 7.2.2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತುಶಿಲ್ಪ ಸಂರಕ್ಷಕರ ಹುದ್ದೆಗಾಗಿ ತಲಾ ಒಬ್ಬರು ಅಭ್ಯರ್ಥಿಗಳನ್ನು ಬಾಹ್ಯ ಮೂಲದಿಂದ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿತ್ತು. ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಈ ಎರಡೂ ಹುದ್ದೆಗಳನ್ನು ಆಯ್ಕೆ ಮಾಡಿ ಭರ್ತಿ ಮಾಡಿಕೊಳ್ಳಲು ಸಮಿತಿಯನ್ನು ರಚಿಸಿ ಆದೇಶಿಸಲಾಗಿತ್ತು. ಈ ಆದೇಶಗಳನ್ವಯ ಮೇಲೆ ಓದಲಾದ (3)ರ ಆಯುಕ್ತರು, ಪ್ರಾಚ್ಯವಸ್ತು ಮತ್ತು ಪರಂಪರೆ ಇಲಾಖೆ ರವರ ಪ್ರಸ್ತಾವನೆಯಲ್ಲಿ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನೊಳಗೊಂಡಂತೆ ರಚಿಸಲಾದ ಆಯ್ಕೆ ಸಮಿತಿಯು ದಿನಾಂಕ: 30.1.2006ರಂದು ವಾಸ್ತು ಶಿಲ್ಪಿ ಮತ್ತು ನಗರ ವಿನ್ಯಾಸಕರ ಹುದ್ದೆಗಾಗಿ ಸಂದರ್ಶನವನ್ನು ಏರ್ಪಡಿಸಿದ್ದು ಸಂದರ್ಶನದಲ್ಲಿ ಸದರಿ ಹುದ್ದೆಗಳಿಗೆ ಅರ್ಜಿ ಸಲ್ಲಿಸಿದ್ದ ಅಭ್ಯರ್ಥಿಗಳ ಪೈಕಿ ಶ್ರೀ ಹೆಚ್.ಡಿ. ನಾಗೇಶ್, ಮೈಸೂರು ಇವರು ನಗರ ವಿನ್ಯಾಸಕರ ಹುದ್ದೆಗಾಗಿ ಮತ್ತು ಶ್ರೀ ಜಿ.ಎಸ್.ವಿ. ಸೂರ್ಯನಾರಾಯಣ ಮೂರ್ತಿ ಇವರು ವಾಸ್ತುಶಿಲ್ಪಿ ಹುದ್ದೆಗೆ ಅರ್ಹ ಅಭ್ಯರ್ಥಿಗಳೆಂದು ಪರಿಗಣಿಸಿ ಆಯ್ಕೆ ಸಮಿತಿಯು ಆಯ್ಕೆ ಮಾಡಲಾಗಿದ್ದು ಆಯ್ಕೆಯಾದ ಅಭ್ಯರ್ಥಿಗಳಿಗೆ ಷರತ್ತುಗಳೊಂದಿಗೆ ನೇಮಕಾತಿ ಆದೇಶ ನೀಡಲು ಅನುಮೋದನೆ ನೀಡಬೇಕೆಂದು ಹಾಗೂ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ಬಾಹ್ಯಮೂಲಕ ಮೂಲಕ ನೇಮಕಾತಿ ಮಾಡಿಕೊಳ್ಳುವ ಅಭ್ಯರ್ಥಿಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-21(ಯೇಜನೆ) ಉಪಶೀರ್ಷಿಕೆ-059-ಇತರೆ ವೆಚ್ಚಗಳ ಅಡಿಯಲ್ಲಿ ಭರಿಸಲು ಅನುಮತಿ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 31 ಕೆಎಂಯು 2006, ಬೆಂಗಳೂರು, ದಿನಾಂಕ: 19ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗೆ ಮಾಸಿಕ ಸಂಚಿತ ವೇತನ ರೂ.16000/- ಆಧಾರದ ಮೇಲೆ ಬಾಹ್ಯ ಮೂಲದ ಮೂಲಕ ಶ್ರೀ ಹೆಚ್.ಡಿ. ನಾಗೇಶ್, ಮೈಸೂರು ಮತ್ತು ಶ್ರೀ ಜಿ.ಎಸ್.ವಿ. ಸೂಯನಾರಾಯಣ ಮೂರ್ತಿ, ಹೈದರಾಬಾದ್ ಇವರುಗಳನ್ನು ಈ ಆದೇಶಕ್ಕೆ ಅನುಬಂಧಿಸಿದ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕಾತಿ ಮಾಡಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ. ಇದರ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ)-059-ಇತರೆ ವೆಚ್ಚಗಳು ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಹುದ್ದೆಗಳನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ ಇಡಿ 266 ಐಎಎಫ್ (ಬಿಎ) 2006 ದಿನಾಂಕ: 31.3.2006ರಲ್ಲಿ ನೀಡಿರುವ ಅಭಿಪ್ರಾಯದನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ,

ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 31 ಕೆಎಂಯು 2006 ದಿನಾಂಕ: 19-1-2007**

**ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ/ಶ್ರೀಮತಿ ಹೆಚ್.ಡಿ. ನಾಗೇಶ್, ಮೈಸೂರು ಮತ್ತು ಶ್ರೀ ಜಿ.ಎಸ್.ವಿ. ಸೂರ್ಯನಾರಾಯಣ ಮೂರ್ತಿ, ಹೈದರಾಬಾದ್ ಇವರುಗಳ ಗುತ್ತಿಗೆ ನೇಮಕಾತಿ ಅವಧಿಯು ದಿ: 19.1.2007 ರಿಂದ 18.1.2008ರವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ.16,000-00 (ಹದಿನಾರು ಸಾವಿರ ರೂಪಾಯಿಗಳು ಮಾತ್ರ) ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್-ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
11. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ವರು ಸರ್ಕಾರಕ್ಕೆ ತುಂಬುಕೊಡಲು ಹೊಣೆಯಾಗಿರುತ್ತಾರೆ.
15. ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 240

**ವಿಷಯ:** ನೊಂದಾಯಿತ ಏಜನ್ಸಿಗಳಿಂದ/ಸಂಸ್ಥೆಗಳಿಂದ ಗುತ್ತಿಗೆ ಆಧಾರದ ಮೇಲೆ ಸ್ವಾಗತಗಾರ ಹುದ್ದೆ, ಲಿಫ್ಟ್ ಆಪರೇಟರ್ ಹುದ್ದೆ, ಸ್ವಚ್ಛತಾ ಸಿಬ್ಬಂದಿಯನ್ನು ನೇಮಕ ಮಾಡಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಅನುಸಮರ್ಥನೆ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ:ಕಸನಿ/ಕಭಗುಸೇ.5/2006-07 ದಿನಾಂಕ: 4.7.2006.

**ಪ್ರಸ್ತಾವನೆ:**

ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:4.7.2006ರ ಪತ್ರದಲ್ಲಿ ಕನ್ನಡ ಭವನದ ಕದಂಬ ಹಾಗೂ ಚಾಲುಕ್ಯ ವಿಭಾಗದ ಸ್ವಚ್ಛತೆ ಮತ್ತು ನಿರ್ವಹಣೆಗಾಗಿ ಸ್ವಾಗತಗಾರ, ಸಿಬ್ಬಂದಿ, ಲಿಫ್ಟ್ ಆಪರೇಟರ್ ಸಿಬ್ಬಂದಿ ಹಾಗೂ ಸ್ವಚ್ಛತಾ ಸಿಬ್ಬಂದಿಯನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಸಲುವಾಗಿ ಟೆಂಡರ್ ಕರೆಯಲಾಗಿದ್ದು, ಸದರಿ ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪರಿಶೀಲಿಸಲಾಗಿ ಮೆಸರ್ಸ್ ವಿಸ್ಡಂ ಸೆಕ್ಯೂರಿಟಿ ಸರ್ವೀಸ್ ನಂ.106, 1ನೇ ಮಹಡಿ, 40 ಅಡಿ ರಸ್ತೆ, ಮಂಜುನಾಥನಗರ, ಬೆಂಗಳೂರು ರವರ ದರಗಳನ್ನು ಒಪ್ಪಿದ್ದು, ಅವರಿಗೆ ದಿನಾಂಕ: 15.6.006 ರಿಂದ 14.6.2007ರವರೆಗೆ ಒಂದು ಸ್ವಾಗತಗಾರರ ಹುದ್ದೆ, 2 ಲಿಫ್ಟ್ ಆಪರೇಟರ್ ಹುದ್ದೆ ಹಾಗೂ 8 ಸ್ವಚ್ಛತಾ ಸಿಬ್ಬಂದಿ ಹುದ್ದೆಗಳಿಗಾಗಿ ಜನರನ್ನು ನಿಯೋಜಿಸಲು ಅನುಮತಿ ನೀಡಲಾಗಿದ್ದು. ಇದಕ್ಕಾಗಿ ತಗಲುವ ರೂ.4,44,121-00 ಗಳನ್ನು ವೆಚ್ಚ ಮಾಡಲು ಅನುಸಮರ್ಥನೆ ನೀಡುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 75 ಕಸನಿ 2006, ಬೆಂಗಳೂರು, ದಿನಾಂಕ: 25ನೇ ಜನವರಿ 2007**

ಸರ್ಕಾರವು ನೊಂದಾಯಿತ ಏಜೆನ್ಸಿ ಸಂಸ್ಥೆಗಳಿಂದ ಹೊರಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಹುದ್ದೆಗಳಿಗೆ ದಿನಾಂಕ: 15.6.2006 ರಿಂದ 14.6.2007ರವರೆಗೆ ಒಂದು ವರ್ಷಕ್ಕೆ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಕ್ರಮವನ್ನು ಈ ಮೂಲಕ ಅನುಸಮರ್ಥಿಸುತ್ತದೆ.

1) ಸ್ವಾಗತಗಾರರು - 1
2) ಲಿಫ್ಟ್ ಆಪರೇಟರ್ - 2
3) ಸ್ವಚ್ಛತಾ ಸಿಬ್ಬಂದಿ - 8

ಈ ಸಂಬಂಧ ತಗಲುವ ವೆಚ್ಚ ರೂ.4,44,121-00ಗಳನ್ನು (ರೂಪಾಯಿ ನಾಲ್ಕು ಲಕ್ಷದ ನಲ್ವತ್ತನಾಲ್ಕು ಸಾವಿರದ ಒಂದು ನೂರ ಇಪ್ಪತ್ತೊಂದು ಮಾತ್ರ) 2006-07ನೇ ಸಾಲಿನ ಲೆಕ್ಕಶೀರ್ಷಿಕೆ 2205-00-800-0-01-200 (ಯೋಜನೇತರ) ಹಾಗೂ ಲೆಕ್ಕಶೀರ್ಷಿಕೆ 4202-04-800-1-01-139 ಜಿಲ್ಲಾ ರಂಗಮಂದಿರ ನಿರ್ಮಾಣ ಹಾಗೂ ಕನ್ನಡ ಭವನ ನಿರ್ಮಾಣ, ನಿರ್ವಹಣೆ (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 752 ಐಎಫ್ (ಬಿಎ) 2006 ದಿನಾಂಕ: 6.10.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 241

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಅ.ಟಿ.ಸಂಖ್ಯೆ: ಲಾ 74 ಎಲ್ಎಎಂ 2004, ದಿನಾಂಕ: 20.12.2006.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 20.12.2006ರ ಅನಧಿಕೃತ ಟಿಪ್ಪಣಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶವನ್ನು ಬಲಪಡಿಸಲು ಕಾನೂನು ಕೋಶದ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸಲು 02 ಕಾನೂನು ಅಧಿಕಾರಿಗಳ ಹುದ್ದೆಯನ್ನು (ಸಿವಿಲ್ ಜಡ್ಜ್ (ಕಿ.ವಿ) ವೇತನ ಶ್ರೇಣಿ ರೂ. 9000-14550 ರಲ್ಲಿ ಸೃಜಿಸಲು ಹಾಗೂ ಈ ಹುದ್ದೆಗಳನ್ನು ನಿಯೋಜನೆ ಮೂಲಕ ತುಂಬುವ ಬಗ್ಗೆ ಕಾನೂನು ನ್ಯಾಯ ಮತ್ತು ಮಾನವ ಹಕ್ಕು ಇಲಾಖೆ ಕೋರಿದೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2006, ಬೆಂಗಳೂರು, ದಿನಾಂಕ: 23ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ಸಿವಿಲ್ ಜಡ್ಜ್ (ಕಿ.ವಿ.) ವೇತನ ಶ್ರೇಣಿ ರೂ. 9000-14550 ರಲ್ಲಿ ಎರಡು ಕಾನೂನು ಅದಿಕಾರಿಗಳ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ 01 ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಅಥವಾ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಹಾಗೂ ಈ ಹುದ್ದೆಗಳನ್ನು ನಿಯೋಜನೆ ಮೇಲೆ ತುಂಬಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2 ವೆಚ್ಚ/5 2007, ದಿನಾಂಕ: 11.1.2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 242

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಬಲರಾಮ ವಿಠಲ ಸಾಂಬ್ರೇಕರ್ ರವರು ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕು, ಗವಾಳಿ ಗ್ರಾಮದ ಸರ್ವೆ ಸಂಖ್ಯೆ:52 ರಲ್ಲಿನ 5-31 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಹೊಂದಿರುವ ಗಣಿಗುತ್ತಿಗೆ ಸಂಖ್ಯೆ:2338ರ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಐ.46:ಎಂಎಂಎಂ.2001 ದಿನಾಂಕ:7.1.2002.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ:ಎ5(1)ಎಂಎನ್‌ಜಿ.ಸಿಆರ್.57:06-07 ದಿನಾಂಕ:5.8.2006.
3. ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿ ಸಂಖ್ಯೆ:12252:2006.
4. ನೋಟೀಸ್ ಸಂಖ್ಯೆ:ಗಭೂಇ.ಗಗುಶಾ:ಗಗು.2338:2844-46 ದಿನಾಂಕ: 14.9.2006.
5. ಶ್ರೀ ಬಲರಾಮ್ ವಿ.ಸಾಂಬ್ರೇಕರ್ ಇವರ ಮನವಿ ದಿನಾಂಕ: 11.10.2006.
6. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ:ಗಭೂಇ:ಗಗುಶಾ:ಗಗು.ಸಂಖ್ಯೆ:2338:2006-07 ದಿನಾಂಕ:27.12.2006.

**ಪ್ರಸ್ತಾವನೆ:**

ಶ್ರೀ ಬಲರಾಮ ವಿಠಲ ಸಾಂಬ್ರೇಕರ್ ಇವರಿಗೆ ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಗವಾಳಿ ಗ್ರಾಮದ ಸರ್ವೆ ಸಂಖ್ಯೆ:52ರಲ್ಲಿನ 5-31 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಖನಿಜಕ್ಕಾಗಿ ಗಣಿಗುತ್ತಿಗೆ ಸಂಖ್ಯೆ:2338 ಅನ್ನು ದಿನಾಂಕ:18.2.2002 ರಿಂದ 30 ವರ್ಷಗಳ ಅವಧಿಗೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವಿವರಣೆ ನೀಡಿ, ಸದರಿ ಪ್ರದೇಶವು ಪಶ್ಚಿಮಘಟ್ಟ ಪ್ರದೇಶದಲ್ಲಿ ಬರುತ್ತಿದ್ದು, ಜಗತ್ಪ್ರಸಿದ್ಧ ಬಾವಲಿಗಳು ವಾಸವಾಗಿರುವ ಬಾರಾಪೇಟೆ ಗುಹೆಗಳಿಗೆ ಹತ್ತಿರದಲ್ಲಿದ್ದು, ಗಣಿ ಕಾರ್ಯವು ಮುಂದುವರಿದಲ್ಲಿ, ಸುತ್ತಮುತ್ತಲಿನ ಪರಿಸರದ ಮೇಲೆ, ಅರಣ್ಯ ಪ್ರದೇಶದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುವುದಲ್ಲದೇ, ಸಸ್ಯ ಹಾಗೂ ಪ್ರಾಣಿಪಕ್ಷಿಗಳ ಸಂಕುಲಕ್ಕೆ ದುಷ್ಪರಿಣಾಮ ಹಾಗೂ ತೊಂದರೆ ಉಂಟಾಗುವ ನಿರೀಕ್ಷೆ ಇರುವುದರಿಂದ, ಸದರಿ

ಗಣಿಗುತ್ತಿಗೆಯನ್ನು ರದ್ದುಗೊಳಿಸಲು ಕೋರಿರುತ್ತಾರೆ. ಅದರಂತೆ, ಮೇಲ್ಕಂಡ ಕಾರಣಗಳಿಂದ ಗಣಿಗುತ್ತಿಗೆಯನ್ನು ರದ್ದುಗೊಳಿಸಬಾರದೇಕೆಂಬ ಬಗ್ಗೆ ವಿವರಣೆ ಕೋರಿ, ಗಣಿ ಗುತ್ತಿಗೆದಾರರಿಗೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ, ಖನಿಜ ರಿಯಾಯಿತಿ ನಿಯಮಾವಳಿ, 1960ರ ನಿಯಮ 26(1)ರನ್ವಯ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ನೋಟೀಸ್ ಜಾರಿ ಮಾಡಿದ್ದರು. ಸದರಿ ನೋಟೀಸಿಗೆ ಗುತ್ತಿಗೆದಾರರು ಕ್ರಮಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ವಿವರಣೆ ನೀಡಿ, ತಮ್ಮದು ಸಣ್ಣ ಸ್ಥಾವರ ಗಣಿಗಾರಿಕೆಯಾಗಿದ್ದು, ಇದರಿಂದ ಸುತ್ತಲಿನ ಪರಿಸರದ ಮೇಲೆ, ಅರಣ್ಯದ ಮೇಲೆ ಯಾವುದೇ ದುಷ್ಪರಿಣಾಮವಾಗುವ ಸಾಧ್ಯತೆ ಇಲ್ಲವೆಂದೂ ಹಾಗೂ ಬಾರಾಪೇಟೆ ಗುಹೆಗಳು 4 ಕಿ.ಮೀ. ದೂರದಲ್ಲಿದ್ದು, ಪಕ್ಷಿ ಸಂಕುಲಕ್ಕೆ ಯಾವುದೇ ಹಾನಿಯಾಗುವ ಸಂಭವವಿಲ್ಲವೆಂದು ತಿಳಿಸಿ, ಗಣಿಗುತ್ತಿಗೆಯನ್ನು ಮುಂದುವರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಸದರಿ ಗಣಿ ಕಾರ್ಯ ಮುಂದುವರಿದಲ್ಲಿ, ಸುತ್ತಮುತ್ತಲಿನ ಪರಿಸರ, ಸಸ್ಯ ಹಾಗೂ ಪ್ರಾಣಿಪಕ್ಷಿ ಸಂಕುಲಕ್ಕೆ ದುಷ್ಪರಿಣಾಮ ಉಂಟಾಗುವುದರಿಂದ, ಇದರ ವಿರುದ್ಧ ಉಚ್ಛ ನ್ಯಾಯಾಲಯದಲ್ಲಿ ಶ್ರೀ ಎನ್.ಎಸ್. ವಿಜಯಾಂತ ಬಾಬುರವರು ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿ ಸಂಖ್ಯೆ:12252:06 ಅನ್ನು ಸಲ್ಲಿಸಿರುತ್ತಾರೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರ ವರದಿಯ ಆಧಾರದ ಮೇಲೆ ಹಾಗೂ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿಯ ಆಧಾರದ ಮೇರೆಗೆ, ಶ್ರೀ ಬಲರಾಮ ವಿಠಲ ಸಾಂಬ್ರೇಕರ್ ಇವರು ನೀಡಿರುವ ವಿವರಣೆಯನ್ನು ಪರಿಗಣಿಸುವುದು ಸಮಂಜಸವಲ್ಲವೆಂದು ತೀರ್ಮಾನಿಸಿ, ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಕ್ರಮಸಂಖ್ಯೆ (6)ರಲ್ಲಿ ಓದಲಾದ ಪತ್ರದಲ್ಲಿ, ಸದರಿ ದಟ್ಟ ಅರಣ್ಯದಲ್ಲಿ ಪರಿಸರ, ಅರಣ್ಯ ಹಾಗೂ ಸಸ್ಯ ಮತ್ತು ಪ್ರಾಣಿ ಪಕ್ಷಿಗಳ ಸಂರಕ್ಷಣೆ ದೃಷ್ಟಿಯಿಂದ, ಸದರಿ ಗಣಿಗುತ್ತಿಗೆಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವವನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ.268:ಎಂಎಂಎಂ.2006, ಬೆಂಗಳೂರು, ದಿನಾಂಕ: 23ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಬಲರಾಮ ವಿಠಲ ಸಾಂಬ್ರೇಕರ್ ಇವರಿಗೆ ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಗವಾಳಿ ಗ್ರಾಮದ ಸರ್ವೇ ಸಂಖ್ಯೆ:52ರಲ್ಲಿ 5-31 ಎಕರೆ (2.33 ಹೆಕ್ಟರ್) ಪ್ರದೇಶದಲ್ಲಿ ಮ್ಯಾಂಗನೀಸ್ ಅದಿರಿಗಾಗಿ ಮಂಜೂರಾಗಿರುವ ಗಣಿಗುತ್ತಿಗೆ ಸಂಖ್ಯೆ:2338 ಅನ್ನು ಎಂ.ಎಂ.(ಡಿ. & ಆರ್.) ಕಾಯ್ದೆ, 1957ರ ಸೆಕ್ಷನ್ 4-ಎ(2)ರನ್ವಯ, ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಜಯಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ, (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 243

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆ ಬೀರೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಸಿದ್ಧಪಡಿಸಲಾಗಿರುವ ಮಹಾ ಯೋಜನೆಗೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ನಅಇ 183 ಮೈಅಪ್ರಾ 2001, ದಿ: 1.6.2001.
2. ಮುಖ್ಯಾಧಿಕಾರಿಗಳು, ಬೀರೂರು ಪುರಸಭೆ ಯೋಜನಾ ಪ್ರಾಧಿಕಾರ ಇವರ ಪತ್ರ ಸಂಖ್ಯೆ. ಟಿಎಂಸಿ:ಯೋ:ಪ್ರಾ: ಬೀರೂರು:ಮ.ಯೋ:32/2006-07, ದಿನಾಂಕ: 27.9.2006.
3. ನಗರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ. ನಯೋ(7) ಬಿ.ಮಾ.ಯೋ(ತಾ)2006, ದಿನಾಂಕ:14.12.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಬೀರೂರು ಪಟ್ಟಣದ ಪುರಸಭೆ ಎಲ್ಲೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ) ರಡಿಯಲ್ಲಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಬೀರೂರು ಪುರಸಭೆ ಯೋಜನಾ ಪ್ರಾಧಿಕಾರವು ಬೀರೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (5) ಮತ್ತು ಕಲಂ (10) ರನ್ವಯ ಕ್ರಮ ಜರುಗಿಸಿ ಮಹಾ ಯೋಜನೆಯನ್ನು ತಯಾರಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು ಇವರು ಬೀರೂರು ಪಟ್ಟಣದ ಸ್ಥಳೀಯ ಯೋಜನಾ ಜನಸಂಖ್ಯೆಯು 2021 ರಲ್ಲಿ 29,000 ಆಗಬಹುದೆಂದು ಅಂದಾಜಿಸಿ ಸಿದ್ಧಪಡಿಸಿರುವ ಮಹಾ ಯೋಜನೆಯ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 733.00 ಹೆಕ್ಟೇರ್ ಪ್ರದೇಶದಲ್ಲಿ 350.79 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ, ಹಾಲಿ ಬೆಳವಣಿಗೆಯು ರಾಷ್ಟ್ರೀಯ ಹೆದ್ದಾರಿ 206ರ ಅಕ್ಕಪಕ್ಕ ಹಾಗೂ ರಾಜ್ಯ ಹೆದ್ದಾರಿ ಸಂ. 76ರ ಅಕ್ಕಪಕ್ಕ, ಪೂರ್ವ-ಪಶ್ಚಿಮ ಭಾಗದಲ್ಲಿ ಹೆಚ್ಚಿನ ಬೆಳವಣಿಗೆಗಳು ಬಂದಿರುವುದಾಗಿ ವರದಿ ಮಾಡಿರುತ್ತಾರೆ. ಅದರಂತೆ ಬೆಳವಣಿಗೆಯ ದಿಕ್ಕನ್ನು ಪರಿಶೀಲಿಸಿ ಬೀರೂರು ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆಯನ್ನು ಗಮನದಲ್ಲಿರಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆ ತಯಾರಿಕೆಯ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಯೋಜಿತ ಬೆಳವಣಿಗೆಗಾಗಿ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ 350.49 ಹೆಕ್ಟೇರ್ ನಗರೀಕರಣ ಪ್ರದೇಶದಲ್ಲಿ ವಸತಿಗಾಗಿ 175.20 ಹೆ. (ಶೇ.49.99), ವಾಣಿಜ್ಯಕ್ಕಾಗಿ 10.52 ಹೆ. (ಶೇ.3.0) ಕೈಗಾರಿಕೆಗಾಗಿ 14.12 ಹೆಕ್ಟೇರ್ (ಶೇ.4.03, ಸಾರ್ವಜನಿಕ ಅರೆ ಸಾರ್ವಜನಿಕಕ್ಕಾಗಿ 37.56 ಹೆ. (ಶೇ.10.72), ಸಾರ್ವಜನಿಕ ಉಪಯುಕ್ತತೆ 10.52 ಹೆ. (ಶೇ.3.0), ಉದ್ಯಾನವನ: ಬಯಲು ಜಾಗಕ್ಕಾಗಿ 3.44 ಹೆ. (ಶ.9.26) ಹಾಗೂ ರಸ್ತೆಗಾಗಿ 70.13 (ಶೇ.20.0) ವಿಸ್ತೀರ್ಣವನ್ನು ನಿಗದಿಪಡಿಸಲಾಗಿದೆ. ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾಳಿಗಳನ್ನು ರೂಪಿಸಲಾಗಿದೆ. 10.0 ಮೀ. ಎತ್ತರಕ್ಕೂ ಮೇಲ್ಪಟ್ಟ ಕಟ್ಟಡಗಳಿಗೆ ಭೂ ಕಂಪನ ಸುರಕ್ಷಿತ ನಿಯಮಾವಳಿಗಳಲ್ಲಿನ ಅಂಶಗಳನ್ನು, ಮಳೆ ನೀರು ಸಂಗ್ರಹಣೆ, ಸೌರಶಕ್ತಿಯಿಂದ ನೀರು ಕಾಯಿಸುವ ಕುರಿತು, ಅಂಗವಿಕಲರಿಗೆ ಸೌಲಭ್ಯ ಒದಗಿಸುವ ಕುರಿತು, ಏಕ ನಿವೇಶನದ ನಿಯಮಾವಳಿಗಳನ್ನು ಸಹ ಸದರಿ ವಲಯ ನಿಯಮಾವಳಿಗಳಲ್ಲಿ ಸೂಕ್ತವಾಗಿ ಅಳವಡಿಸಲಾಗಿದೆ. ಬೀರೂರು ಪಟ್ಟಣದ ಪುರಸಭೆಯ ಎಲ್ಲೆ ಹೊರಗೆ ಅಜ್ಜಂಪುರ-ಯಗಟಿ ರಸ್ತೆಯನ್ನು ಘನತ್ಯಾಜ್ಯ ವಸ್ತುಗಳನ್ನು ವಿಲೇವಾರಿ ಮಾಡಲು ಸೂಕ್ತ ಪ್ರದೇಶಗಳನ್ನು ಗುರುತಿಸಲಾಗಿದೆ. ಹಾಗೂ ಟ್ರಕ್ ಟರ್ಮಿನಲ್‌ಗಳಿಗೆ ನಗರೀಕರಣ ಎಲ್ಲೆಯ ಅಂಚಿನಲ್ಲಿ ಜಾಗ ಕಾಯ್ದಿರಿಸಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಬೀರೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಿದ್ಧಪಡಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 03 ಮೈಆಪ್ರಾ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2007**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀರೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ. ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 244

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ವಿಷಯ:** ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ (ಬೆಂಗಳೂರು ಮಹಾನಗರ ಪಾಲಿಕೆ ಹೊರತುಪಡಿಸಿ) ಸ್ಯಾನಿಟರಿ ದಫೇದಾರ್, ವಾಹನ ಚಾಲಕರು/ ಸಹಾಯಕರುಗಳು (ಕ್ಲೀನರ್ಸ್) ಇವರುಗಳಿಗೆ ರಜೆ ದಿನಗಳಲ್ಲಿ ಸ್ವಚ್ಛತಾ ಕಾರ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವುದಕ್ಕಾಗಿ 15 ದಿನಗಳ ವಿಶೇಷ ರಜೆ ಸೌಲಭ್ಯ ನಗದೀಕರಣದ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ನಅಇ 45 ಎಹೆಚ್‌ಡಿ 2002, ದಿನಾಂಕ:21.1.2004.
2. ಆಯುಕ್ತರು, ಮೈಸೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ:ಹೆಚ್2ಪಿಆರ್/135/04-05 ದಿನಾಂಕ: 13.9.2004, 23.11.004, 1.4.2005 ಮತ್ತು ಪತ್ರ ಸಂಖ್ಯೆ: ಸಿಇಎಸ್‌ಟಿ(4)ಸಿಆರ್/172/2002-03 ದಿನಾಂಕ:31.8.2005 ಹಾಗೂ 31.1.2006.
3. ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ:ಇಎಸ್‌ಟಿ:7:ಸಿಆರ್-246:03-04 ದಿನಾಂಕ: 25.11.2004 ಮತ್ತು ಪತ್ರ ಸಂಖ್ಯೆ:ಇಎಸ್‌ಟಿ:7:ಸಿಆರ್.86/2005-06 ದಿನಾಂಕ:23.7.2005.
4. ಆಯುಕ್ತರು, ಬಳ್ಳಾರಿ ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ: ಮನಪಾಬ/ಸಿಬ್ಬಂದಿ/ದಿ.ರ/22/2005-06/199 ದಿನಾಂಕ:7/22.7.2005.
5. ಆಯುಕ್ತರು, ಬೆಳಗಾವಿ ಮಹಾನಗರ ಪಾಲಿಕೆ ಇವರ ಪತ್ರ ಸಂಖ್ಯೆ:ಮನಬೆ/ ಸಾಆವಿ/ಸಿಬ್ಬಂದಿ-1/ಸಿಆರ್/05-06 ದಿನಾಂಕ: 11.8.2005 ಮತ್ತು 16.1.2006.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳಲ್ಲಿ (ಬೆಂಗಳೂರು ಮಹಾನಗರ ಪಾಲಿಕೆ ಹೊರತುಪಡಿಸಿ) ಅಗತ್ಯ ಸೇವೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೌರಕಾರ್ಮಿಕರು ಮತ್ತು ನೀರು ಸರಬರಾಜು ಸಹಾಯಕರುಗಳಿಗೆ ಸಾರ್ವತ್ರಿಕ ರಜಾ ದಿನಗಳಲ್ಲಿ/ಹೆಚ್ಚುವರಿ ದಿನಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಕ್ಕಾಗಿ 5 ದಿನಗಳ ವಿಶೇಷ ರಜಾ ಸೌಲಭ್ಯವನ್ನು ಪ್ರತಿ ವರ್ಷಕ್ಕೊಮ್ಮೆ ನಗದೀಕರಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ (2) ರಿಂದ (5) ರಲ್ಲಿ ಓದಲಾದ ಪತ್ರಗಳಲ್ಲಿ ರಾಜ್ಯದ ಮಹಾನಗರ ಪಾಲಿಕೆಗಳ ಆಯುಕ್ತರುಗಳು ರಜಾ ದಿನಗಳಲ್ಲಿ ಸ್ವಚ್ಛತಾ ಕಾರ್ಯದಲ್ಲಿ ಕಾರ್ಯನಿರ್ವಹಿಸುವ ಪೌರ ಕಾರ್ಮಿಕರು ಮತ್ತು ನೀರು ಸರಬರಾಜು ಸಹಾಯಕರ ಜೊತೆಗೆ ಹಿರಿಯ ವಾಹನ ಚಾಲಕರು, ಕಿರಿಯ ವಾಹನ ಚಾಲಕರು, ಸಹಾಯಕರು (ಕ್ಲೀನರ್) ಮತ್ತು ನಿರ್ಮಲೀಕರಣ ದಫೇದಾರರುಗಳಿಗೆ (ಮೇಸ್ತ್ರೀಗಳು) 15 ದಿನಗಳ ರಜಾ ಸೌಲಭ್ಯ ನಗದೀಕರಣ ಸೌಲಭ್ಯವನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಇದೇ ತರಹ ಪ್ರಸ್ತಾವನೆಯ ಬಗ್ಗೆ ಆರ್ಥಿಕ ಇಲಾಖೆಗೆ ಕಡತವನ್ನು ಕಳುಹಿಸಿದಾಗ (ನಅಇ 125 ಎಂಎಂಸಿ 2005), ಆರ್ಥಿಕ ಇಲಾಖೆಯು ಸರ್ಕಾರದ ನಿಯಮಗಳನ್ನು ಮಹಾನಗರ ಪಾಲಿಕೆಯು ಪಾಲಿಸುತ್ತಿದ್ದರೂ ಸಹ, ಆಡಳಿತ ಇಲಾಖೆಯ ಹಂತದಲ್ಲಿಯೇ ಕ್ರಮ ತೆಗೆದುಕೊಳ್ಳುವಂತೆ ಮತ್ತು ಆರ್ಥಿಕ ಇಲಾಖೆಯ ಅನುಮೋದನೆ ಅವಶ್ಯವಿಲ್ಲವೆಂದು ಟಿಪ್ಪಣಿ ಸಂಖ್ಯೆ:ಆಇ 509 ವೆಚ್ಚ-9 2006 ದಿನಾಂಕ:7.11.2006ರಲ್ಲಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 189 ಎಹೆಚ್‌ಡಿ 2004, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ (ಬೆಂಗಳೂರು ಮಹಾನಗರ ಪಾಲಿಕೆ ಹೊರತುಪಡಿಸಿ) ಸ್ವಚ್ಛತಾ ಕಾರ್ಯಗಳಲ್ಲಿ ನೇರವಾಗಿ ಭಾಗಿಯಾಗಿ ಕಾರ್ಯನಿರ್ವಹಿಸುತ್ತಿರುವ ಹಿರಿಯ ವಾಹನ ಚಾಲಕರು, ಕಿರಿಯ ವಾಹನ ಚಾಲಕರು, ಸಹಾಯಕರು (ಕ್ಲೀನರ್ಸ್) ಮತ್ತು ನಿರ್ಮಲೀಕರಣ ದಫೇದಾರ್ (ಮೇಸ್ತ್ರೀಗಳು) ಇವರುಗಳು ಸಾರ್ವತ್ರಿಕ ರಜಾ ದಿನಗಳಲ್ಲಿ ಮತ್ತು ಹಬ್ಬಹರಿ ದಿನಗಳಲ್ಲಿ ಕಾರ್ಯನಿರ್ವಹಿಸಿದ್ದಲ್ಲಿ ಗರಿಷ್ಟ 15 ದಿನಗಳ ವಿಶೇಷ ರಜೆ ನಗದೀಕರಣ ಸೌಲಭ್ಯವನ್ನು ಸಂಬಂಧಪಟ್ಟ ಆಯುಕ್ತರು ಈ ಸೌಲಭ್ಯವನ್ನು ವಿಸ್ತರಿಸುವಾಗ ಆರ್ಥಿಕ ಮಿತವ್ಯಯವನ್ನು ಗಮನದಲ್ಲಿರಿಸಿಕೊಂಡು ಯಾವುದೇ ದುರುಪಯೋಗಕ್ಕೆ ಅವಕಾಶ ನೀಡದಂತೆ ಹಾಗೂ ಘನತ್ಯಾಜ್ಯ ವಸ್ತುಗಳ ವಿಲೇವಾರಿ ನಿರ್ವಹಣೆಯಲ್ಲಿ ಯಾವುದೇ ಕುಂದು ಬಾರದಂತೆ ಖಚಿತಪಡಿಸಿಕೊಳ್ಳುವ ಷರತ್ತಿಗೊಳಪಟ್ಟು ಪ್ರತಿ ವರ್ಷ ನಗದೀಕರಿಸಿಕೊಳ್ಳಲು ಸರ್ಕಾರದ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 245

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ವಿಷಯ:** ಹುಬ್ಬಳ್ಳಿ-ಧಾರವಾಡ ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಚಟುವಟಿಕೆಗಳಿಗಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಜಮೀನನ್ನು ಹಂಚಿಕೆ ಮಾಡುವ ಕುರಿತು.

**ಓದಲಾಗಿದೆ:**

1. ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ ಇವರ ಪತ್ರ ಸಂಖ್ಯೆ:ಎಚ್‌ಡಿಎಂಸಿ 60/03/160/2006 ದಿನಾಂಕ:29.7.006, 29.8.2006, ದಿನಾಂಕ:20.11.2006, ಮತ್ತು 8.1.2007 ಸಂಖ್ಯೆ:ಎಚ್‌ಡಿಎಂಸಿ 10 005 06 ದಿನಾಂಕ:12.12.2006 ಮತ್ತು ಅರೆ ಸರ್ಕಾರಿ ಪತ್ರ ಸಂಖ್ಯೆ:ಎಚ್‌ಡಿಎಂಸಿ 6003 160 06 ದಿನಾಂಕ:27.12.2006, 8.01.2007.
2. ಅರೆ ಸರ್ಕಾರಿ ಪತ್ರ ಸಂಖ್ಯೆ: ಮಾತಂ 18 ಅಡವಿ 2006 ದಿನಾಂಕ: 22.11.006 ಪ್ರಧಾನ ಕಾರ್ಯದರ್ಶಿ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.
3. ಜಿಲ್ಲಾಧಿಕಾರಿಗಳು, ಧಾರವಾಡ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ:ಡಿಸಿ/ಪಿಎ/ಸಿಆರ್-338/2006-07 ದಿನಾಂಕ: 2.1.2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರಗಳಲ್ಲಿ ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಇವರು, ಧಾರರಾಡ ಜಿಲ್ಲಾ ಆಡಳಿತ, ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಕರ್ನಾಟಕ ವಾಣಿಜ್ಯ ಮಂಡಳಿ, ಹುಬ್ಬಳ್ಳಿ ಹಾಗೂ ಹುಬ್ಬಳ್ಳಿ-ಧಾರಾಡ ಮಹಾನಗರ ಪಾಲಿಕೆ ಸಹಯೋಗದಲ್ಲಿ ದಿನಾಂಕ:20.5.2006 ರಂದು ಹುಬ್ಬಳ್ಳಿಯಲ್ಲಿ ಆಯೋಜಿಸಲಾದ ಮಾಹಿತಿ ತಂತ್ರಜ್ಞಾನ ಹೂಡಿಕೆದಾರರ ಸಭೆಯಲ್ಲಿ ಭಾಗವಹಿಸಿದ ಮಾನ್ಯ ಮುಖ್ಯಮಂತ್ರಿಗಳು ಹುಬ್ಬಳ್ಳಿಯನ್ನು ಒಂದು ಬೃಹತ್ ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಕ್ಷೇತ್ರವನ್ನಾಗಿ ಉನ್ನತೀಕರಿಸಲು ತೀರ್ಮಾನಿಸಿ ಸದರಿ ಉದ್ದೇಶಕ್ಕಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಸ್ವಾಧೀನದಲ್ಲಿರುವ 56.7 ಎಕರೆ ಖಾಲಿ ಜಾಗವನ್ನು ಉಪಯೋಗಿಸಿಕೊಳ್ಳಲು ಠರಾವು ಸಂಖ್ಯೆ:867 ದಿನಾಂಕ:30.5.2006ರಂದು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು ಠರಾವನ್ನು ಪಾಸು ಮಾಡಿದೆಯೆಂದು ತಿಳಿಸಿರುತ್ತಾರೆ. ಈ ಹಿನ್ನೆಲೆಲ್ಲಿ ಕೆಸಿಸಿಐಎಫ್‌ನ ಮಾಜಿ ಅಧ್ಯಕ್ಷರಾದ ಶ್ರೀ ಮದನ ದೇಸಾಯಿ ಅವರ ಅಧ್ಯಕ್ಷತೆಯಲ್ಲಿ ಮಾಹಿತಿ ತಂತ್ರಜ್ಞಾನ ಸಲಹಾ ಸಮಿತಿಯನ್ನು ರಚಿಸಿ ಮಾರ್ಗ ಸೂಚಿಗಳನ್ನು ಮತ್ತು ಅಂತಹ ಮಾಹಿತಿ ತಂತ್ರಜ್ಞಾನದ ಉದ್ದಿಮೆದಾರರು STIP (Software Technology Part of India)ನಲ್ಲಿ ನೋಂದಾಯಿಸಿಕೊಂಡವರಿಗೆ ಆದ್ಯತೆ ನೀಡಲು ಉದ್ದೇಶಿಸಿರುತ್ತದೆ.

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ವಶದಲ್ಲಿರುವ ಖಾಲಿ ಜಾಗವನ್ನು ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಉದ್ಯಮಿಗಳು ಕೋರಿರುವ ಜಮೀನನ್ನು ಹಂಚಿಕೆ ಮಾಡುವಂತೆ ಉಲ್ಲೇಖ (2)ರ ಪತ್ರದಲ್ಲಿ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (3)ರ ಧಾರವಾಡ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಉದ್ದೇಶಿತ ಭೂಮಿಯನ್ನು ಕಾನೂನು ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ನೀಡುವ ಬಗ್ಗೆ ಸಮಗ್ರವಾಗಿ ಪರ್ಯಾಲೋಚಿಸಿ ಲೋಕೋಪಯೋಗಿ ಇಲಾಖೆಯ ಅತಿಥಿ ಗೃಹಕ್ಕೆ ಹೊಂದಿಕೊಂಡಂತೆ 6.20 ಎಕರೆ ಜಮೀನು ಸೇರಿದಂತೆ 30 ಎಕರೆ ಕಂದಾಯ ಜಮೀನು ಬ್ಲಾಕ್ ನಂ.31 ರಾಯಪುರ ಗ್ರಾಮದಲ್ಲಿ ಲಭ್ಯವಿರುತ್ತದೆಂದು ದೃಢಪಡಿಸಿರುತ್ತಾರೆ.

ಉಲ್ಲೇಖ (1)ರ ಪತ್ರಗಳಲ್ಲಿ, ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ, ಇವರು ಉದ್ದೇಶಿತ ಭೂಮಿಯನ್ನು ಈ ಕೆಳಕಾಣಿಸಿರುವ ಸಂಸ್ಥೆಗಳಿಗೆ ಹಂಚಲು ಉದ್ದೇಶಿಸಲಾಗಿದೆಯೆಂದು ತಿಳಿಸಿರುತ್ತಾರೆ.

| ಕ್ರಮ ಸಂಖ್ಯೆ | ಕಂಪನಿಗಳ ಹೆಸರು | ಹಂಚಿಕೆ ಮಾಡಲು ಉದ್ದೇಶಿಸಿರುವ ಭೂಮಿ |
|---|---|---|
| 1. | ಮೆ//NSI, ಹೆಲ್ತ್ ಕೇರ್ ಬಿಪಿಓ ಕಂಪನಿ, ಹುಬ್ಬಳ್ಳಿ | 5 ಎಕರೆ |
| 2. | ಮೆ//ದೀಕ್ಷಾ ಟೆಕ್ನಾಲಿಜೀಸ್, ಬೆಂಗಳೂರು | 3 ಎಕರೆ |
| 3. | ಮೆ//ಎಬೆಲ್ ಡಿಸೈನ್ ಇಂಜಿನಿಯರಿಂಗ್ ಸರ್ವಿಸ್ ಪ್ರೈವೇಟ್ ಲಿಮಿಟೆಡ್, ಧಾರವಾಡ | 1.5 ಎಕರೆ |
| 4. | ಮೆ//PAC ಸಾಫ್ಟ್, ಬೆಂಗಳೂರು | 4 ಎಕರೆ |
| 5. | ಮೆ//ಟ್ರಿನಿಟಿ ಟೆಕ್ನಾಲಿಜೀಸ್ ಅಂಡ್ ಸಾಫ್ಟ್‌ವೇರ್ ಸೆಲ್ಯೂಶನ್ಸ್ ಪ್ರೈ.ಲಿ., ಹುಬ್ಬಳ್ಳಿ | 1 ಎಕರೆ |
| 6. | ಮೆ//ಮಹಾವೀರ್ ಇನ್‌ಫೋವೇ, ಹುಬ್ಬಳ್ಳಿ | 1 ಎಕರೆ |
| 7. | ಮೆ//ಪೇನ್‌ಆರ್ಬರ್ ಇನ್‌ಫೋಟೆಕ್, ಹುಬ್ಬಳ್ಳಿ | 1 ಎಕರೆ |
| 8. | ಮೆ//ಸಂಕಲ್ಪ ಸೆಮಿಕಂಡಕ್ಟರ್, ಬೆಂಗಳೂರು | 3 ಎಕರೆ |
| 9. | ಮೆ//ಸಿ2ಸಿಲಿಕಾನ್ ಸಾಫ್ಟ್‌ವೇರ್ ಸೆಲ್ಯೂಶೆನ್ಸ್ ಪ್ರೈ.ಲಿ., ಬೆಂಗಳೂರು | 3 ಎಕರೆ |
| 10. | ಮೆ//ಎನ್‌ವಿಷನ್, ಬೆಂಗಳೂರು | 1 ಎಕರೆ |
| 11. | ಮೆ//ಔರುಲೆ ಟೆಕ್ನಾಲಿಜಿಸ್ ಪ್ರೈ.ಲಿಮಿಟೆಡ್, ಬೆಂಗಳೂರು | 2.5 ಎಕರೆ |
| | **ಒಟ್ಟು** | **26 ಎಕರೆ** |

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಆಯುಕ್ತರ ವರದಿ ಪ್ರಕಾರ ರಾಷ್ಟ್ರೀಯ ಹೆದ್ದಾರಿ ಸಮೀಪ ರೈಲ್ವೆ ಹಳಿಯ ಪಕ್ಕದಲ್ಲಿರುವ ಕೆಐಎಡಿಬಿಗೆ ಸೇರಿದ ಭೂಮಿಯ ಬೆಲೆಯನ್ನು ಎಕರೆಗೆ ರೂ.8.00 ಲಕ್ಷದಂತೆ ನಿಗದಿಪಡಿಸಲಾಗಿರುತ್ತದೆ. ಆದ್ದರಿಂದ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಜಮೀನನ್ನು IT/BT ಉದ್ಯಮಿಗಳಿಗೆ ಒಂದು ಎಕರೆಗೆ ರೂ.8.00 ಲಕ್ಷಗಳ ಬೆಲೆಗೆ ಹಂಚಿಕೆ ಮಾಡಬಹುದೆಂದು ಮಹಾನಗರ ಪಾಲಿಕೆಯ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ಜಮೀನಿನ ನೆರೆಹೊರೆಯ ಜಮೀನಿಗೆ ಈಗಾಗಲೇ ಮಾರ್ಗದರ್ಶಿ ಮೌಲ್ಯವಾಗಿ ರೂ.13.07 ಲಕ್ಷವನ್ನು ನಿಗದಿಪಡಿಸಿದ್ದಾಗ್ಯೂ ಉದ್ದೇಶಿತ ಭೂಮಿಯು ಅಭಿವೃದ್ಧಿ ಹೊಂದಿಲ್ಲದ ಕಾರಣ ಪ್ರತಿ ಎಕರೆಗೆ ರೂ.10 ಲಕ್ಷ ನಿಗದಿಪಡಿಸುವುದು ಸಮಂಜಸವಾಗಿರುತ್ತದೆ.

ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 116 ಎಹೆಚ್‌ಡಿ 2006, ಬೆಂಗಳೂರು, ದಿನಾಂಕ: 24ನೇ ಜನವರಿ 2007**

ಹುಬ್ಬಳ್ಳಿ-ಧಾರವಾಡ ನಗರವನ್ನು ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಗಮ್ಯಸ್ಥಾನವನ್ನಾಗಿ ಮಾಡುವ ಉದ್ದೇಶವನ್ನು ಹೊಂದಿರುವ ಕಂಪೆನಿಗಳಿಗೆ ಪ್ರತಿ ಎಕರೆ ಒಂದಕ್ಕೆ ರೂ.10.00 (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಲಕ್ಷಗಳ ಬೆಲೆಗೆ ಉದ್ದೇಶಿತ ಮಾಹಿತಿ ತಂತ್ರಜ್ಞಾನ/ಜೈವಿಕ ತಂತ್ರಜ್ಞಾನ ಕಂಪೆನಿಗಳಿಗೆ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಜಮೀನನ್ನು ಹಂಚಿಕೆ ಮಾಡಲು ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆಯನ್ನು ನೀಡಲಾಗಿದೆ.

ಅ) ಪ್ರಸ್ತಾಪಿತ ಜಮೀನನ್ನು ಐಟಿ/ಬಿಟಿ ಕಂಪನಿಗಳಿಗೆ ಯಾವ ಉದ್ದೇಶಕ್ಕಾಗಿ ಹಂಚಿಕೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.

ಆ) ಪ್ರಸ್ತಾಪಿತ ಜಮೀನನ್ನು ಗುತ್ತಿಗೆ/ಉಪ ಗುತ್ತಿಗೆ/ಪರಭಾರೆ ಮಾಡತಕ್ಕದ್ದಲ್ಲ.

ಇ) ಉದ್ದಿಮೆಯನ್ನು ಪ್ರಾರಂಭಿಸುವ ಮುನ್ನ ಸಂಬಂಧಪಟ್ಟ ಇಲಾಖೆ/ ಸಂಸ್ಥೆಗಳಿಂದ ಅಗತ್ಯವಾದ ನಿರಾಕ್ಷೇಪಣಾ ಪತ್ರವನ್ನು ಪಡೆಯತಕ್ಕದ್ದು.

ಈ) ನಿಬಂಧನೆಗಳನ್ನು ಉಲ್ಲಂಘಿಸಿದ ಸಂದರ್ಭದಲ್ಲಿ ಸದರಿ ಜಮೀನನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು ಹಂಚಿಕೆಯನ್ನು ರದ್ದುಪಡಿಸಿ ಜಮೀನನ್ನು ವಾಪಸ್ಸು ಪಡೆಯುವ ಅಧಿಕಾರವನ್ನು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 246

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**INFRASTRUCTURE DEVELOPMENT SECRETARIAT**

**Sub:** Release of funds to KSIIDC towards 6th draw down of Equity Share Capital of Bangalore International Airport Ltd.

**Read:**
1) G.O. No. IDD 14 DIA 2002 dated 08.07.2004.
2) G.O. No. IDD 41 DIA 2005 dated 22.09.2005.
3) G.O. No. IDD 41 DIA 2005 dated 03.01.2006.
4) G.O. No. IDD 41 DIA 2005(P) dated 27.3.2006.
5) G.O. No. IDD 41 DIA 2005 19.08.2006.
6) Letter No.DGM (BIAP)/3529/2006-07 dated 08.12.006 of the CMD, KSIIDC.

**Preamble:**

In Government Orders read at Sl.No.1 to 5 Government have released funds to KSIIDC for 1st to 5th draw down of the schedule towards investment in the equity share capital in Bangaore International Airport Ltd.

2. The CMD, KSIIDC in letter dated 08.12.2006 read at Sl.No.6 above, has requested to release an amount of Rs.5.84 crore (Rupees Five crore and Eighty Four lakhs) only towards the 6th draw down contribution of Government of Karnataka to the equity share capital in BIAI, based on the construction budget of Rs.280.07 crore for the quarter October-December 2006.

**Government Order No.IDD 41 DIA 2005, Bangalore, Dated: 25th January 2007**

After careful examination of the above proposal, Government are pleased to release a sum of Rs.5.84 crore (Rupees Five crore and Eighty Four lakhs) only to KSIIDC being the 6th drawal of equity contribution of Government of Karnataka during 2006-07 to BIAL as per the agreement in which Rs.3.24 crore shall be met out of the budget provision of Rs.10.78 crore under the Head of Account "5465-01-190-2-01-211 - KSIIDC Investment (Plan)" and remaining amount of Rs.2.60 crore shall be met through reappropriation from the Head of Accountant "5465-01-190-2-02 (Plan) - State Support to BIAP - 100 Financial Assistance" as provided in G.O.No. FD 29 BRS 2007, dated 20.01.2007.

2. The CMD, KSIIDC is authorized to draw the amount on a payee's receipt countersigned by the Under Secretary to Government, Infrastructure Development Department.

3. This order is issued with the concurrence of Finance Department vide its U.O.Note No. FD 2296.Exp-I/06 dated 2.01.2007.

By Order and in the name of the Governor of Karnataka,

**N. MANJULA GEETHA**

P.R. 247

Under Secretary to Government,

Infrastructure Development Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 141 ಎಸ್‌ಇಎನ್ 2005 ದಿನಾಂಕ:2.2.2006.
2. ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರ ದಿನಾಂಕ:8.3.2006ರ ಉತ್ತರ.

**ಪ್ರಸ್ತಾವನೆ:**

ಶ್ರೀ ಜೆ.ಆರ್. ಲೋಬೋ, ಕೆಎಎಸ್ ಅಧಿಕಾರಿ ಅವರು ಮಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1.5.2000 ರಿಂದ ಜಾರಿ ಬರುವಂತೆ 64 ಮಂದಿ ಬದಲಿ ಪೌರ ಕಾರ್ಮಿಕರ ಸೇವೆಯನ್ನು ಸರ್ಕಾರದ ಗಮನಕ್ಕೆ ತಾರದೆ ಸಕ್ರಮಗೊಳಿಸಿ ಅವರಿಗೆ ರೂ.2500-3850 ವೇತನ ಶ್ರೇಣಿ ಮಂಜೂರು ಮಾಡಿ ಆದೇಶ ಹೊರಡಿಸಿ ಸರ್ಕಾರದ ಸ್ಥಾಯಿ ಆದೇಶಗಳನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿದ ಆರೋಪಕ್ಕಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:2.2.06ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:8.3.06ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 141 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 29ನೇ ಜನವರಿ 2007**

ಪ್ರಸ್ತಾವನೆಯನ್ನು ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶಂಕರನಾರಾಯಣ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.8.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು ರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸೂಕ್ತ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ಅವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

ಪಿ.ಆರ್. 249

**ವಿಷಯ:** ಶ್ರೀ ಓ.ಕಿಶನ್ ಚಂದ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 96 ಎಸ್‌ಇಎನ್ 05 ದಿ:16.12.05.
2. ಶ್ರೀ ಓ.ಕಿಶನ್ ಚಂದ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿ:02.01.06.

**ಪ್ರಸ್ತಾವನೆ:**

ಶ್ರೀ ಓ.ಕಿಶನ್ ಚಂದ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭಾ ಯೋಜನೆ-3, ಧಾರವಾಡ ಅವರು ಈ ಕಛೇರಿಯನ್ನು ಧಾರವಾಡದಿಂದ ಬಾಗಲಕೋಟೆಗೆ ಸ್ಥಳಾಂತರಿಸದೇ ಸರ್ಕಾರದ ಆದೇಶವನ್ನು ಉಲ್ಲಂಘಿಸಿದ ಆರೋಪದ ಸಂಬಂಧ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿ:16.12.05ರ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ನೋಟೀಸಿಗೆ ಸದರಿ ಅಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿ:02.01.06ರ ಉತ್ತರ ಸಲ್ಲಿಸಿ ವಿಶೇಷ ಭೂಸ್ವಾಧೀನಾಧಿಕಾರಿ, 3ನೇ ಮಲಪ್ರಭಾ ಯೋಜನೆ, ಧಾರವಾಡ ಈ ಕಾರ್ಯಾಲಯವನ್ನು ಮಾನ್ಯ ಆಯುಕ್ತರು, ಪುನರ್ವಸತಿ ಹಾಗೂ ಭೂಸ್ವಾಧೀನ ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ನವನಗರ, ಬಾಗಲಕೋಟೆ, ಅವರು ಬಾಗಲಕೋಟೆಯ ಕೊಳಗೇರಿ ಕ್ರಾಸಿಗೆ ಸ್ಥಳಾಂತರಿಸಲು ಜಲಸಂಪನ್ಮೂಲ ಇಲಾಖೆಯ ಕಾರ್ಯದರ್ಶಿಯವರಿಗೆ ಪತ್ರ ಬರೆದಿದ್ದರು. ಅದಕ್ಕೆ ಪ್ರತಿಯಾಗಿ ಅವರು ಸದರಿ ಕಾರ್ಯಾಲಯವನ್ನು ಧಾರವಾಡದಲ್ಲಿಯೇ ಮುಂದುವರಿಸಬೇಕೆಂದು ಶಿಫಾರಸ್ಸು ಮಾಡಿದ್ದರು. ನಂತರ ಈ ಯೋಜನೆಯಲ್ಲಿ ಭೂಸ್ವಾಧೀನಗೊಳ್ಳುತ್ತಿರುವ ಬಹುತೇಕ ಜಮೀನುಗಳು ಬಾಗಲಕೋಟೆ ಸಮೀಪ ಇರುವುದರಿಂದ ಅಲ್ಲಿಯ ಜನರ ಅನುಕೂಲಕ್ಕಾಗಿ ಸಾರ್ವಜನಿಕ ಹಿತದೃಷ್ಟಿಯನ್ನು ಗಮನದಲ್ಲಿರಿಸಿ ಈ ಕಛೇರಿಯನ್ನು ಬಾಗಲಕೋಟೆಗೆ ಸ್ಥಳಾಂತರಿಸುವುದು ಉಚಿತವೆಂದು ಸರ್ಕಾರ ತೀರ್ಮಾನಿಸಿ ದಿ:08.10.04ರಂದು ಆದೇಶ ಹೊರಡಿಸಿರುತ್ತದೆ. ಈ ಕಛೇರಿಗೆ ಸ್ಥಳಾಂತರಿಸುವ ಬಗ್ಗೆ ನೀರಾವರಿ ಇಲಾಖೆ ಮತ್ತು ಕಂದಾಯ ಇಲಾಖೆ ನಡುವೆ ಪತ್ರ ವ್ಯವಹಾರ ನಡೆದಿದ್ದು, ನೀರಾವರಿ ಇಲಾಖೆಯವರು ಸ್ಥಳಾಂತರಿಸುವುದು ಬೇಡ ಎಂದು, ಕಂದಾಯ ಇಲಾಖೆಯವರು ಈ ಕಚೇರಿಯನ್ನು ಬಾಗಲಕೋಟೆ ಜನರಿಗೆ ಅನುಕೂಲವಾಗುವಂತೆ ಬಾಗಲಕೋಟೆಗೆ ಸ್ಥಳಾಂತರಿಸಲು ಆದೇಶ ಮಾಡುತ್ತಿದ್ದು, ತಾವು ಈ ಎರಡೂ ಇಲಾಖೆಗಳ ನಡುವೆ ಇಕ್ಕಟ್ಟಿಗೆ ಸಿಲುಕಿದಂತಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಈ ಕಛೇರಿಯನ್ನು ಸ್ಥಳಾಂತರಿಸುವ ವಿಷಯದಲ್ಲಿ ತಮ್ಮದೇನೂ ವೈಯಕ್ತಿಕ ಆಸಕ್ತಿ ಇಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಈ ಇಲಾಖೆಯನ್ನು ಸ್ಥಳಾಂತರಿಸುವ ಕುರಿತಂತೆ ಉದ್ದೇಶಪೂರ್ವಕವಾಗಿ ಮೇಲಾಧಿಕಾರಿಗಳ ಆದೇಶ ಉಲ್ಲಂಘನೆ ಮಾಡುವ ಯಾವುದೇ ದುರುದ್ದೇಶವನ್ನು ಇಟ್ಟುಕೊಂಡಿಲ್ಲವೆಂದು ತಿಳಿಸಿರುತ್ತಾರೆ. ಈ ಕಛೇರಿ ವಿಷಯಲ್ಲಿ ಪ್ರಕರಣವು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಮತ್ತು ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವುದಾಗಿ ತಿಳಿಸಿ ಕಚೇರಿಯನ್ನು ಸ್ಥಳಾಂತರಿಸದೇ ಇರುವ ಸಾದಕ-ಬಾದಕಗಳನ್ನು ತಮ್ಮ ಉತ್ತರದಲ್ಲಿ ವಿವರವಾಗಿ ವಿವರಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ತಮ್ಮ ಮೇಲೆ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರು ಸಲ್ಲಿಸಿರುವ ಉತ್ತರವನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಯಿತು. ಆರೋಪಿತರು ವಿಶೇಷ ಭೂಸ್ವಾಧೀನಾಧಿಕಾರಿ, ಮಲಪ್ರಭಾ ಯೋಜನೆ-3, ಧಾರವಾಡ ಕಛೇರಿಯನ್ನು ಬಾಗಲಕೋಟೆಗೆ ಸ್ಥಳಾಂತರಿಸುವ ವಿಷಯದಲ್ಲಿ ಯಾವುದೇ ವೈಯಕ್ತಿಕ ಉದ್ದೇಶ

ಇಟ್ಟುಕೊಂಡಿರಲಿಲ್ಲವೆಂಬುದು ಅವರ ಉತ್ತರದಿಂದ ತಿಳಿದು ಬರುತ್ತದೆ. ಈ ಕಚೇರಿಯನ್ನು ಸ್ಥಳಾಂತರಿಸುವ ವಿಷಯದಲ್ಲಿ ನೀರಾವರಿ ಇಲಾಖೆ ಮತ್ತು ಕಂದಾಯ ಇಲಾಖೆಯ ನಡುವೆ ಜಟಾಪಟಿ ನಡೆದಿರುವುದು ಕಂಡು ಬರುತ್ತದೆ. ಹೀಗಾಗಿ ಕಛೇರಿ ಸ್ಥಳಾಂತರಿಸುವಲ್ಲಿ ಆರೋಪಿತರ ವೈಯಕ್ತಿಕತೆ ಇಲ್ಲದೇ ಇರುವುದರಿಂದ ಸದರಿ ಅಧಿಕಾರಿಯವರು ಸಲ್ಲಿಸಿರುವ ಉತ್ತರವನ್ನು ಒಪ್ಪಿ ಅವರನ್ನು ಆರೋಪ ಮುಕ್ತರನ್ನಾಗಿ ಮಾಡಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 96 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 29ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಓ.ಕಿಶನ್ ಚಂದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿನಾಂಕ:16.12.2005ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 250

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಾರ್ಯನಿರತ ವಿಭಾಗಗಳ ಜಂಟಿ ನಿರ್ದೇಶಕರ ಹಾಗೂ ಉಪ ನಿರ್ದೇಶಕರ ಹುದ್ದೆಗಳನ್ನು ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಡತ ಸಂಖ್ಯೆ: ಪಿಡಿ 124 ಪಿಎಂಐ 2006ರಲ್ಲಿನ ಪ್ರಸ್ತಾವನೆ.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಾರ್ಯ ನಿರತ ವಿಭಾಗದ ಶ್ರೀ ಎಸ್.ಎ. ಕಾತರಕಿ, ಜಂಟಿ ನಿರ್ದೇಶಕರು, ಪಿ.ಎಂ.ಐ.ವಿಭಾಗ ಇವರ ಸೇವೆಯನ್ನು ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗಕ್ಕೆ ಪೂರ್ಣ ಪ್ರಮಾಣದಲ್ಲಿ ಅವಶ್ಯಕವಿರುವುದರಿಂದ ಪಿ.ಎಂ.ಐ. ವಿಭಾಗದ ಜಂಟಿ ನಿರ್ದೇಶಕರ ಹುದ್ದೆಯನ್ನು ಪ್ರದೇಶಾಭಿವೃದ್ಧಿ ಮಂಡಲಿ ವಿಭಾಗಕ್ಕೆ ಹಾಗೂ ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗದಲ್ಲಿ ಇರುವ ಉಪ ನಿರ್ದೇಶಕರ ಹುದ್ದೆಯನ್ನು ಪಿ.ಎಂ.ಐ. ವಿಭಾಗಕ್ಕೆ ಸ್ಥಳಾಂತರಿಸಿ ಈ ಬಗ್ಗೆ ಸೂಕ್ತ ಆದೇಶವನ್ನು ಹೊರಡಿಸಿ ಶ್ರೀ ಎಸ್.ಎ. ಕಾತರಕಿ, ಜಂಟಿ ನಿರ್ದೇಶಕರು ಇವರನ್ನು ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗದಲ್ಲಿ ಜಂಟಿ ನಿರ್ದೇಶಕರನ್ನಾಗಿ ವರ್ಗಾಯಿಸುವಂತೆ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಕಡತದಲ್ಲಿ ಪ್ರಸ್ತಾಪಿಸಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 28 ಸಆಸೇ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಕಾರ್ಯ ನಿರತ ವಿಭಾಗದ ಪಿ.ಎಂ.ಐ. ವಿಭಾಗದಲ್ಲಿ ಪ್ರಸ್ತುತ ಅಸ್ಥಿತ್ವದಲ್ಲಿರುವ ಜಂಟಿ ನಿರ್ದೇಶಕರ ಹುದ್ದೆಯನ್ನು ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗಕ್ಕೆ ಹಾಗೂ ಪ್ರದೇಶಾಭಿವೃದ್ಧಿ ಮಂಡಳಿ ವಿಭಾಗದಲ್ಲಿರುವ ಉಪ ನಿರ್ದೇಶಕರ ಹುದ್ದೆಯನ್ನು ಪಿ.ಎಂ.ಐ. ವಿಭಾಗಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 251

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

## ಶಿಕ್ಷಣ ಸಚಿವಾಲಯ

**ವಿಷಯ:** ದಿನಾಂಕ: 02.02.2000ದ ಪೂರ್ವದಲ್ಲಿ ಜಾರಿಯಲ್ಲಿದ್ದ ಸಿಬ್ಬಂದಿ ಮಾದರಿ (ಸ್ಟಾಫಿಂಗ್ ಪ್ಯಾಟ್ರನ್) ಪ್ರಕಾರ ದಿನಾಂಕ: 02.02.2000ದ ಪೂರ್ವದಲ್ಲಿ ಅನುದಾನಿತ ಖಾಸಗಿ ಪ್ರೌಢಶಾಲೆಗಳಲ್ಲಿ ನೇಮಕಾತಿಯಾದ ವೃತ್ತಿ ಅಥವಾ ಚಿತ್ರಕಲಾ ಶಿಕ್ಷಕರುಗಳನ್ನು ಸಹಾಯಾನುದಾನಕ್ಕೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 02.02.2000ದ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 52 ವಿವಿಧ 1999ರಲ್ಲಿ ಒಳಗೊಂಡ ನಿಯಮಗಳು.

**ಪ್ರಸ್ತಾವನೆ:**

1) ಮೇಲೆ ಓದಲಾದ ನಿಯಮಗಳ ಪ್ರಕಾರ ಅಂದರೆ, ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಂಸ್ಥೆಗಳ ನೌಕರರ ನೇಮಕಾತಿ ಮತ್ತು ಸೇವಾ ಷರತ್ತು ಮತ್ತು ನಿಬಂಧನೆಗಳು) ನಿಯಮಗಳು, 1999ರ ಅನುಬಂಧ-4ರನ್ವಯ, ಅನುದಾನಿತ ಖಾಸಗಿ ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿಯನ್ನು (ಸ್ಟಾಫಿಂಗ್ ಪ್ಯಾಟ್ರನ್) ನಿಗದಿಪಡಿಸಲಾಗಿದೆ. ಅದರಲ್ಲಿ ವೃತ್ತಿ ಶಿಕ್ಷಕರ ಮತ್ತು ಚಿತ್ರಕಲಾ ಶಿಕ್ಷಕರ ಹುದ್ದೆಗಳು ಒಳಗೊಂಡಿರುವುದಿಲ್ಲ. ಆದರೆ ದಿನಾಂಕ: 02.02.2000 ರಿಂದ ಸದರಿ ನಿಯಮಗಳು ಜಾರಿಗೆ ಬಂದ ಪೂರ್ವದಲ್ಲಿ, ಪ್ರೌಢಶಾಲೆಗಳ ಅನುದಾನ ಸಂಹಿತೆಯ ಪ್ರಕಾರ ಜಾರಿಯಲ್ಲಿದ್ದ ಸಿಬ್ಬಂದಿ ಮಾದರಿಯಲ್ಲಿ ವೃತ್ತಿ ಶಿಕ್ಷಕರ ಮತ್ತು ಚಿತ್ರಕಲಾ ಶಿಕ್ಷಕರ ಹುದ್ದೆಗಳು ಒಳಗೊಂಡಿದ್ದವು. ಅವುಗಳಿಗೆ ಸಂಬಂಧಿಸಿದಂತೆ, ಮೇಲೆ ಉಲ್ಲೇಖಿಸಲಾದ ನಿಯಮಗಳ ಅನುಬಂಧ-04 ರಲ್ಲಿನ ಟಿಪ್ಪಣಿ-03ರನ್ವಯ ಈ ಕೆಳಗೆ ಉದ್ಧರಿಸಿದಂತೆ ಆಸ್ಪದ ಕಲ್ಪಿಸಲಾಗಿದೆ.

"The craft teacher existing as on the date of commencement of these rules shall continue in position. However, the posts held by the incumbent shall cease to exist consequent to their retirement, resignation, promotion, death or dismissal, remval etc.,"

ಆದರೂ, ದಿನಾಂಕ: 02.02.2000ದ ಪೂರ್ವದಲ್ಲಿ ಜಾರಿಯಲ್ಲಿದ್ದ ಸಿಬ್ಬಂದಿ ಮಾದರಿ (ಸ್ಟಾಫಿಂಗ್ ಪ್ಯಾಟ್ರನ್) ಪ್ರಕಾರ ದಿನಾಂಕ:02.02.2000ದ ಪೂರ್ವದಲ್ಲಿ ಅನುದಾನಿತ ಖಾಸಗಿ ಪ್ರೌಢಶಾಲೆಗಳಲ್ಲಿ ನೇಮಕಾತಿಯಾದ ವೃತ್ತಿ ಅಥವಾ ಚಿತ್ರಕಲಾ ಶಿಕ್ಷಕರುಗಳನ್ನು ಸಹಾಯಾನುದಾನಕ್ಕೆ ಒಳಪಡಿಸುವ ಬಗ್ಗೆ ಸರ್ಕಾರ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 388 ಎಸ್‌ಇಪಿ 2005, ಬೆಂಗಳೂರು, ದಿನಾಂಕ: 27ನೇ ಜನವರಿ 2007**

2) ಅನುದಾನಿತ ಖಾಸಗಿ ಪ್ರೌಢ ಶಾಲೆಗಳಲ್ಲಿ ದಿನಾಂಕ:02.02.2000ದ ಪೂರ್ವದಲ್ಲಿ ಜಾರಿಯಲ್ಲಿದ್ದ ಸಿಬ್ಬಂದಿ ಮಾದರಿ (ಸ್ಟಾಫಿಂಗ್ ಪ್ಯಾಟ್ರನ್) ಪ್ರಕಾರ ದಿನಾಂಕ: 02.02.2000ದ ಪೂರ್ವದಲ್ಲಿ ಅನುದಾನಿತ ಖಾಸಗಿ ಪ್ರೌಢಶಾಲೆಗಳಲ್ಲಿ ನೇಮಕಾತಿಯಾದ ಒಂದು ಪ್ರೌಢಶಾಲೆಗೆ ಒಬ್ಬರು ವೃತ್ತಿ ಅಥವಾ ಒಬ್ಬರು ಚಿತ್ರ ಕಲಾ ಶಿಕ್ಷಕರುಗಳನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸಹಾಯಾನುದಾನಕ್ಕೆ ಒಳಪಡಿಸಬಹುದೆಂದು ಸರ್ಕಾರವು ಈ ಮೂಲಕ ಆದೇಶಿಸಿದೆ.

**ಷರತ್ತುಗಳು**

(1) ಆಯಾಯ ಆಡಳಿತ ಮಂಡಳಿಯು ವೃತ್ತಿ ಶಿಕ್ಷಕರ ಅಥವಾ ಚಿತ್ರಕಲಾ ಶಿಕ್ಷಕರ ಹುದ್ದೆಗೆ ದಿನಾಂಕ:02.02.2000ದ ಮೊದಲ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆದು, ನಿಗದಿತ ಕಾರ್ಯ ವಿಧಾನದ ಪ್ರಕಾರ ನೇಮಕಾತಿ ಮಾಡಿಕೊಂಡಿರಬೇಕು.

(2) ಆಡಳಿತ ಮಂಡಳಿಯು ನೀಡಿದ ನೇಮಕಾತಿ ಆದೇಶದಂತೆ, ಅಭ್ಯರ್ಥಿ ದಿನಾಂಕ: 02.02.2000ದ ಪೂರ್ವದಲ್ಲೇ ಕರ್ತವ್ಯಕ್ಕೆ ಹಾಜರಾಗಿ, ಇದುವರೆವಿಗೂ ಸೇವೆಯನ್ನು ಸತತವಾಗಿ ನಿರ್ವಹಿಸುತ್ತಿರಬೇಕು.

(3) ಸಂಬಂಧಿಸಿದ ಅಭ್ಯರ್ಥಿಯು ದಿನಾಂಕ: 02.02.2000ರ ಪೂರ್ವದಲ್ಲಿ ನೇಮಕಾತಿ ಮಾಡಿಕೊಂಡ ದಿನಾಂಕಕ್ಕೆ ಅನ್ವಯವಾಗುವಂತೆ ನಿಗದಿತ ವಯೋಮಿತಿಯೊಳಗೆ ಇದ್ದು, ನಿಗದಿತ ವಿದ್ಯಾರ್ಹತೆ ಹೊಂದಿರತಕ್ಕದ್ದು.

(4) ಈ ಸಂಬಂಧ ಉಂಟಾಗುವ ಹೆಚ್ಚುವರಿ ವೆಚ್ಚಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಅನುದಾನದ ಅವಶ್ಯಕತೆ ಇದ್ದಲ್ಲಿ, ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(5) ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಶಿಕ್ಷಣ ಸಂಸ್ಥೆಗಳ ನೌಕರರ ನೇಮಕಾತಿ ಮತ್ತು ಸೇವಾಷರತ್ತು ಮತ್ತು ನಿಬಂಧನೆಗಳು), ನಿಯಮಗಳು, 1999 ಇದಕ್ಕೆ ಅಗತ್ಯ ತಿದ್ದುಪಡಿ ತರುವುದನ್ನು ಬಾಕಿ ಇಟ್ಟು ಈ ಆದೇಶವನ್ನು ಹೊರಡಿಸಲಾಗಿದೆ. ಅಗತ್ಯ ತಿದ್ದುಪಡಿಯನ್ನು ನಂತರ ಪ್ರತ್ಯೇಕವಾಗಿ ಮಾಡಲಾಗುವುದು.

(6) ಒಂದು ಪ್ರೌಢಶಾಲೆಯಲ್ಲಿ ಒಬ್ಬ ವಿಶೇಷ ಶಿಕ್ಷಕರು ಅಂದರೆ ವೃತ್ತಿ ಅಥವಾ ಚಿತ್ರಕಲಾ ಶಿಕ್ಷಕರಿಗೆ ಮಾತ್ರ ಅವಕಾಶವಿದ್ದು ಅದರಂತೆ ಅನುಮೋದಿಸಬಹುದು.

3) ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 05.01.2007ರ ಟಿಪ್ಪಣಿ ಸಂಖ್ಯೆ: ಆಇ 1175 ವೆಚ್ಚ-8/2006ರ ಪ್ರಕಾರ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

4) ಈ ಆದೇಶದನ್ವಯ ಸದರಿ ವೃತ್ತಿ ಅಥವಾ ಚಿತ್ರಕಲಾ ಶಿಕ್ಷಕರನ್ನು ಭವಿಷ್ಯವರ್ತಿಯಿಂದ ಸಹಾಯಾನುದಾನಕ್ಕೆ ಒಳಪಡಿಸುವ ಅಧಿಕಾರವನ್ನು ಈ ಮೂಲಕ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯಾಯಾ ಆಯುಕ್ತರುಗಳಿಗೆ ಪ್ರತ್ಯಾಯೋಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಲಿಂಗಯ್ಯ**

ಪಿ.ಆರ್. 252

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ, ನೆಲಮಂಗಲ, ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ಮೇಲ್ದರ್ಜೆ: ಬೆಂಗ್ರಾ:ಸಇಂ5:18:2006-07, ದಿನಾಂಕ: 12.9.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ, ನೆಲಮಂಗಲ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| | **ಹೊಸಕೋಟೆ ತಾಲ್ಲೂಕು:** | |
| 1. | ಹೊಸಕೋಟೆ ಮಾಲೂರು ರಸ್ತೆಯಿಂದ ಮಾಕನಹಳ್ಳಿ ದೇವಲಾಪುರ, ದೇವನಗುಂದಿ ರಾ.ಹೆ.207 ದೊಡ್ಡಹುನ್ನಸಂದ್ರ ಡಿ.ಹೊಸಹಳ್ಳಿ, ಮೇಡಹಳ್ಳಿ, ಹಂಧೇನಹಳ್ಳಿ, ಎಸ್. ನಾರಾಯಣ ಕೆರೆ ಮಾರ್ಗವಾಗಿ ಚಿಕ್ಕತಿರುಪತಿ ಹಾಗೂ ಜಿಲ್ಲಾ ಗಡಿ ಸೇರುವ ರಸ್ತೆ. | 17.50 |
| 2. | ರಾ.ಹೆ-4 ರಿಂದ ಕೊಳತ್ತೂರು ಸೋಲೂರು ಇಂಜನಹಳ್ಳಿ ಮಾರ್ಗ ದೊಡ್ಡದೇನಹಳ್ಳಿ ಸೇರುರ ರಸ್ತೆ. | 13.00 |
| 3. | ಶಿಡ್ಲಘಟ್ಟ ರಸ್ತೆಯ ತಮ್ಮರಸನಹಳ್ಳಿ, ಟಿ. ಅಗ್ರಹಾರ, ಬಾವಾಪುರ, ಬಿ.ಆರ್.ಎಫ್. ರಸ್ತೆ ಶಿವನಾಪುರ ಚಿಕ್ಕನಹಳ್ಳಿ ಮಾರ್ಗ ತೊರ್ನಹಳ್ಳಿಗೆ ಸೇರುವ ರಸ್ತೆ | 21.00 |
| 4. | ಶಿವನಾಪುರದಿಂದ ಮೋತ್ತಕದಹಳ್ಳಿ ಚೊಕ್ಕಸಂದ್ರ ಮಾರ್ಗವಾಗಿ ನಂದಗುಡಿ ಸೇರುವ ರಸ್ತೆ. | 8.00 |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 5. | ಎನ್.ಹೆಚ್. 207 ರಿಂದ ನಡವತ್ತಿ, ಬಿಸನಹಳ್ಳಿ, ಹುಮಸಹಳ್ಳಿ, ಪರಮನಹಳ್ಳಿ, ತಿಂಡ್ಲು, ಕೆ.ಹೊಸಹಳ್ಳಿ, ಕಟ್ಟಿಗೇನಹಳ್ಳಿ ಮಾರ್ಗ ಹೊಸಕೋಟೆ ಮಾಲೂರು ರಸ್ತೆಗೆ ಸೇರುವ ರಸ್ತೆ | 23.00 |
| 6. | ನಗರೇನಹ್ಳಿಯಿಂದ ದೊಡ್ಡ ಕೋಲಿಗ ಬಿ.ಆರ್.ಎಫ್ ರಸ್ತೆಯ ಡಿ. ಶೆಟ್ಟಿಹಳ್ಳಿ ಮಲಿಯಪ್ಪನಹಳ್ಳಿ, ಶಿರನಾಪುರ ಹೆತ್ತಕ್ಕಿ ಸೇರುವ ರಸ್ತೆ. | 18.00 |
| 7. | ನಂದಗುಡಿಯಿಂದ ರಾಮಗೋವಿಂದಪುರ, ಚಿಮ್ಮಸಂದ್ರ, ಅನುಪಳ್ಳಿ, ಬೆಂಡಿಗಾನಹಳ್ಳಿ ಮಾರ್ಗ ಹೊಸಕೋಟೆ-ಶಿಡ್ಲಘಟ್ಟ (ಎನ್.ಹೆಚ್.35) ಸೇರುವ ರಸ್ತೆ. | 8.50 |
| | **ಒಟ್ಟು** | **109.00** |
| | **ನೆಲಮಂಗಲ ತಾಲ್ಲೂಕು:** | |
| 1. | ರಾ.ಹೆ.4 ರಿಂದ ಬೂದಿಹಾಳ್, ಕಾಚನಹಳ್ಳಿ, ಬರದಿ, ಹಸುರವಳ್ಳಿ ಮಾರ್ಗ ದೊಡ್ಡಬೆಲೆ ರೈಲ್ವೇ ನಿಲ್ದಾಣ ಸೇರುವ ರಸ್ತೆ. | 15.00 |
| 2. | ಕಳಲುಗಟ್ಟದಿಂದ ಜಕ್ಕನಹಳ್ಳಿ ಮಾರ್ಗ ಗುಡ್ಡೇಗೌಡನಹಳ್ಳಿ ಚನ್ನೋಹಳ್ಳಿ ಸೇರುವ ರಸ್ತೆ | 4.85 |
| 3. | ಬೇಗೂರು, ತ್ಯಾಮಗೊಂಡ್ಲು ನಿಡುವಂದ (ಜಿ.ಮು.ರ) ರಸ್ತೆಯಿಂದ ಕಂಭಯ್ಯನಪಾಳ್ಯ ಮಾರ್ಗ ಜಕ್ಕನಹಳ್ಳಿ ಸೇರುವ ರಸ್ತೆ. | 3.00 |
| 4. | ರಾ.ಹೆ.4 ರಿಂದ ಕೆಂಗಲ್ ಕೆಂಪೋಹಳ್ಳಿ, ಅಪ್ಪೇರಹಳ್ಳಿ ಮಾರ್ಗ ಟಿಎನ್‌ಎಪಿ-ಎಸ್.ಹೆಚ್-3 (ಶಾರದಾ ಕ್ರಾಸ್) ಸೇರುವ ರಸ್ತೆ. | 6.00 |
| 5. | ರಾಜ್ಯ ಹೆದ್ದಾರಿ-3 ರಿಂದ (ದಾಬಸ್ ಪೇಟೆ ಬಳಿ) ವೀರಸಾಗರ ಮಾರ್ಗ ಶ್ರೀಪತಿಹಳ್ಳಿ ಸೇರುವ ರಸ್ತೆ. | 6.00 |
| 6. | ರಾ.ಹೆ.4 ರಿಂದ ದೊಡ್ಡೇರಿ, ಗೋವೇನಹಳ್ಳಿ, ಅರಿವೇಸಂದ್ರ ಮಾರ್ಗ ಕಳಲಗಟ್ಟ ಸೇರುವ ರಸ್ತೆ. | 5.00 |
| 7. | ರಾ.ಹೆ.4 ರಿಂದ ದೇವರ ಹೊಸಹಳ್ಳಿ, ಕಾಮಲಾಪುರ, ಅಗಳಕುಪ್ಪೆ, ಮಾರ್ಗ ಸೊಂಪುರ ಸೇರುವ ರಸ್ತೆ. | 15.00 |
| 8. | ರಾ.ಹೆ.4 ರಿಂದ ವೀರನಂಜೀಪುರ ಮಾರ್ಗವಾಗಿ ಕಾಚನಹಳ್ಳಿ ಸೇರುವ ರಸ್ತೆ. | 5.50 |
| 9. | ಸೊಂಡೆಕೊಪ್ಪ ಬಾಣಸವಾಡಿ ರಸ್ತೆ. | 4.20 |
| 10. | ರಾ.ಹೆ.4 ರಿಂದ ಗೆದ್ದಲಹಳ್ಳಿ ತೊರೆಕೆಂಪೋಹಳ್ಳಿ ಮಾರ್ಗವಾಗಿ ಕೆಂಪಲಿಂಗನಹಳ್ಳಿ ಕುಪ್ಪೇಮಾಳ ಸೇರುವ ರಸ್ತೆ. | 7.00 |
| 11. | ಕೆಂಪಲಿಂಗನಹಳ್ಳಿ ಕುಪ್ಪೇಮಾಲ ರಸ್ತೆಯಿಂದ ಭೂಸಂದ್ರ ಮಾರ್ಗವಾಗಿ ರಾ.ಹೆ.48 ನ್ನು ಸೇರುವ ರಸ್ತೆ. | 6.00 |
| | **ಒಟ್ಟು** | **77.55** |
| | **ದೊಡ್ಡಬಳ್ಳಾಪುರ ತಾಲ್ಲೂಕು:** | |
| 1. | ಹಾಡೋನಹಳ್ಳಿಯಿಂದ ಮೆಳೇಕೋಟೆ ಮಾರ್ಗವಾಗಿ ತಾಲ್ಲೂಕು ಗಡಿಗೆ ಸೇರುವ ರಸ್ತೆ. | 11.50 |
| 2. | ಕೆ.ಎನ್. ರಸ್ತೆಯಿಂದ ಗಡ್ಡಂಬಚ್ಚಹಳ್ಳಿ ನಾರಸಿಂಹನಹಳ್ಳಿ ಮಾರ್ಗವಾಗಿ ಬಾಲೇನಹಳ್ಳಿಗೆ ಸೇರುವ ರಸ್ತೆ | 13.50 |
| | **ಒಟ್ಟು** | **25.00** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 38 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 23ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| | **ಹೊಸಕೋಟೆ ತಾಲ್ಲೂಕು:** | |
| 1. | ಹೊಸಕೋಟೆ ಮಾಲೂರು ರಸ್ತೆಯಿಂದ ಮಾಕನಹಳ್ಳಿ ದೇವಲಾಪುರ, ದೇವನಗುಂದಿ ರಾ.ಹೆ.207 ದೊಡ್ಡಹುನ್ನಸಂದ್ರ ಡಿ.ಹೊಸಹಳ್ಳಿ, ಮೇಡಹಳ್ಳಿ, ಹಂಧೇನಹಳ್ಳಿ, ಎಸ್. ನಾರಾಯಣ ಕೆರೆ ಮಾರ್ಗವಾಗಿ ಚಿಕ್ಕತಿರುಪತಿ ಹಾಗೂ ಜಿಲ್ಲಾ ಗಡಿ ಸೇರುವ ರಸ್ತೆ. | 17.50 |
| 2. | ರಾ.ಹೆ-4 ರಿಂದ ಕೊಳತ್ತೂರು ಸೋಲೂರು ಇಂಜನಹಳ್ಳಿ ಮಾರ್ಗ ದೊಡ್ಡದೇನಹಳ್ಳಿ ಸೇರುರ ರಸ್ತೆ. | 13.00 |
| 3. | ಶಿಡ್ಲಘಟ್ಟ ರಸ್ತೆಯ ತಮ್ಮರಸನಹಳ್ಳಿ, ಟಿ. ಅಗ್ರಹಾರ, ಬಾವಾಪುರ, ಬಿ.ಆರ್.ಎಫ್. ರಸ್ತೆ ಶಿವನಾಪುರ ಚಿಕ್ಕನಹಳ್ಳಿ ಮಾರ್ಗ ತೊರ್ನಹಳ್ಳಿಗೆ ಸೇರುವ ರಸ್ತೆ | 21.00 |
| 4. | ಶಿವನಾಪುರದಿಂದ ಮೋತ್ತಕದಹಳ್ಳಿ ಚೊಕ್ಕಸಂದ್ರ ಮಾರ್ಗವಾಗಿ ನಂದಗುಡಿ ಸೇರುವ ರಸ್ತೆ. | 8.00 |
| 5. | ಎನ್.ಹೆಚ್. 207 ರಿಂದ ನಡವತ್ತಿ, ಬಿಸನಹಳ್ಳಿ, ಹುಮಸಹಳ್ಳಿ, ಪರಮನಹಳ್ಳಿ, ತಿಂಡ್ಲು, ಕೆ.ಹೊಸಹಳ್ಳಿ, ಕಟ್ಟಿಗೇನಹಳ್ಳಿ ಮಾರ್ಗ ಹೊಸಕೋಟೆ ಮಾಲೂರು ರಸ್ತೆಗೆ ಸೇರುವ ರಸ್ತೆ | 23.00 |
| 6. | ನಗರೇನಹಳ್ಳಿಯಿಂದ ದೊಡ್ಡ ಕೋಲಿಗ ಬಿ.ಆರ್.ಎಫ್ ರಸ್ತೆಯ ಡಿ. ಶೆಟ್ಟಿಹಳ್ಳಿ ಮಲಿಯಪ್ಪನಹಳ್ಳಿ, ಶಿವನಾಪುರ ಹೆತ್ತಕ್ಕಿ ಸೇರುವ ರಸ್ತೆ. | 18.00 |
| 7. | ನಂದಗುಡಿಯಿಂದ ರಾಮಗೋವಿಂದಪುರ, ಚಿಮ್ಮಸಂದ್ರ, ಅನುಪಳ್ಳಿ, ಬೆಂಡಿಗಾನಹಳ್ಳಿ ಮಾರ್ಗ ಹೊಸಕೋಟೆ-ಶಿಡ್ಲಘಟ್ಟ (ಎನ್.ಹೆಚ್.35) ಸೇರುವ ರಸ್ತೆ. | 8.50 |
| | **ಒಟ್ಟು** | **109.00** |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| | **ನೆಲಮಂಗಲ ತಾಲ್ಲೂಕು:** | |
| 1. | ರಾ.ಹೆ.4 ರಿಂದ ಬೂದಿಹಾಳ್, ಕಾಚನಹಳ್ಳಿ, ಬರದಿ, ಹಸುರವಳ್ಳಿ ಮಾರ್ಗ ದೊಡ್ಡಬೆಲೆ ರೈಲ್ವೇ ನಿಲ್ದಾಣ ಸೇರುವ ರಸ್ತೆ. | 15.00 |
| 2. | ಕಳಲುಗಟ್ಟದಿಂದ ಜಕ್ಕನಹಳ್ಳಿ ಮಾರ್ಗ ಗುಡ್ಡೇಗೌಡನಹಳ್ಳಿ ಚನ್ನೋಹಳ್ಳಿ ಸೇರುವ ರಸ್ತೆ | 4.85 |
| 3. | ಬೇಗೂರು, ತ್ಯಾಮಗೊಂಡ್ಲು ನಿಡುವಂದ (ಜಿ.ಮು.ರ) ರಸ್ತೆಯಿಂದ ಕಂಭಯ್ಯನಪಾಳ್ಯ ಮಾರ್ಗ ಜಕ್ಕನಹಳ್ಳಿ ಸೇರುವ ರಸ್ತೆ. | 3.00 |
| 4. | ರಾ.ಹೆ.4 ರಿಂದ ಕೆಂಗಲ್ ಕೆಂಪೋಹಳ್ಳಿ, ಅವ್ವೇರಹಳ್ಳಿ ಮಾರ್ಗ ಟಿಎನ್‌ಎಪಿ-ಎಸ್.ಹೆಚ್-3 (ಶಾರದಾ ಕ್ರಾಸ್) ಸೇರುವ ರಸ್ತೆ. | 6.00 |
| 5. | ರಾಜ್ಯ ಹೆದ್ದಾರಿ-3 ರಿಂದ (ದಾಬಸ್ ಪೇಟೆ ಬಳಿ) ವೀರಸಾಗರ ಮಾರ್ಗ ಶ್ರೀಪತಿಹಳ್ಳಿ ಸೇರುವ ರಸ್ತೆ. | 6.00 |
| 6. | ರಾ.ಹೆ.4 ರಿಂದ ದೊಡ್ಡೇರಿ, ಗೋವೇನಹಳ್ಳಿ, ಅರಿವೇಸಂದ್ರ ಮಾರ್ಗ ಕಳಲಗಟ್ಟ ಸೇರುವ ರಸ್ತೆ. | 5.00 |
| 7. | ರಾ.ಹೆ.4 ರಿಂದ ದೇವರ ಹೊಸಹಳ್ಳಿ, ಕಾಮಲಾಪುರ, ಅಗಳಕುಪ್ಪೆ, ಮಾರ್ಗ ಸೊಂಪುರ ಸೇರುವ ರಸ್ತೆ. | 15.00 |
| 8. | ರಾ.ಹೆ.4 ರಿಂದ ವೀರನಂಜೀಪುರ ಮಾರ್ಗವಾಗಿ ಕಾಚನಹಳ್ಳಿ ಸೇರುವ ರಸ್ತೆ. | 5.50 |
| 9. | ಸೊಂಡೆಕೊಪ್ಪ ಬಾಣಸವಾಡಿ ರಸ್ತೆ. | 4.20 |
| 10. | ರಾ.ಹೆ.4 ರಿಂದ ಗೆದ್ದಲಹಳ್ಳಿ ತೊರೆಕೆಂಪೋಹಳ್ಳಿ ಮಾರ್ಗವಾಗಿ ಕೆಂಪಲಿಂಗನಹಳ್ಳಿ ಕುಪ್ಪೇಮಾಳ ಸೇರುವ ರಸ್ತೆ. | 7.00 |
| 11. | ಕೆಂಪಲಿಂಗನಹಳ್ಳಿ ಕುಪ್ಪೇಮಾಲ ರಸ್ತೆಯಿಂದ ಭೂಸಂದ್ರ ಮಾರ್ಗವಾಗಿ ರಾ.ಹೆ.48 ನ್ನು ಸೇರುವ ರಸ್ತೆ. | 6.00 |
| | **ಒಟ್ಟು** | **77.55** |
| | **ದೊಡ್ಡಬಳ್ಳಾಪುರ ತಾಲ್ಲೂಕು:** | |
| 1. | ಹಾಡೋನಹಳ್ಳಿಯಿಂದ ಮೆಳೇಕೋಟೆ ಮಾರ್ಗವಾಗಿ ತಾಲ್ಲೂಕು ಗಡಿಗೆ ಸೇರುವ ರಸ್ತೆ. | 11.50 |
| 2. | ಕೆ.ಎನ್. ರಸ್ತೆಯಿಂದ ಗಡ್ಡಂಬಚ್ಚಹಳ್ಳಿ ನಾರಸಿಂಹನಹಳ್ಳಿ ಮಾರ್ಗವಾಗಿ ಬಾಲೇನಹಳ್ಳಿಗೆ ಸೇರುವ ರಸ್ತೆ | 13.50 |
| | **ಒಟ್ಟು** | **25.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

ಪಿ.ಆರ್. 253

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕು ಮಾಗಡಿ ವಿಧಾನಸಭಾ ವ್ಯಾಪ್ತಿಯಲ್ಲಿ ಬರುವ 5 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ಮೇಘ:ರಸ್ತೆ: ಮೇಲ್ದರ್ಜೆಗೇರಿಸುವುದು:ಕಿಇಂ-2:2006-07, ದಿನಾಂಕ: 26.10.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಬೆಂಗಳೂರು ದಕ್ಷಿಣ ತಾಲ್ಲೂಕು ಮಾಗಡಿ ವಿಧಾನಸಭಾ ವ್ಯಾಪ್ತಿಯಲ್ಲಿ ಬರುವ 5 ಗ್ರಾಮಾಂತರ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಚುಂಚನಕುಪ್ಪೆಯಿಂದ ದೊಡ್ಡೇರಿ ಗುರುವೇಬಾಯಿ ಪಾಳ್ಯ | 8.50 |
| 2. | ಬ್ಯಾಲಳುವಿನಿಂದ ರಾಮೋಹಳ್ಳಿಯ ಮೊದಲನೇ ಮೈಲಿಗಲ್ಲು ಮಾರ್ಗವಾಗಿ ಲಕ್ಷ್ಮೀಪುರ, ಕೋಲೂರು. | 8.50 |
| 3. | ಹುಲವೇನಹಳ್ಳಿಯಿಂದ ಎಸ್. ಗೊಲ್ಲಹಳ್ಳಿ ಕುರುಬರಪಾಳ್ಯ ಸೊಲುವಾರ ಮಾರ್ಗವಾಗಿ | 3.80 |
| 4. | ಮಂಚನಬೆಲೆ ಡ್ಯಾಂ ನಿಂದ ಚಂದ್ರಪ್ಪ ಸರ್ಕಲ್ | 7.50 |
| 5. | ಬೆಂ. ಮೈ.ರಸ್ತೆಯಿಂದ ಚುಂಚನಕುಪ್ಪೆಯಿಂದ, ಪೆದ್ದನಪಾಲ್ಯ ಮತ್ತು ಮುದ್ದನಪಾಳ್ಯ ಮಾರ್ಗವಾಗಿ | 6.30 |
| | **ಒಟ್ಟು** | **34.60** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 40 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 23ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 5 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಚುಂಚನಕುಪ್ಪೆಯಿಂದ ದೊಡ್ಡೇರಿ ಗುರುವೇಬಾಯಿ ಪಾಳ್ಯ | 8.50 |
| 2. | ಬ್ಯಾಲಳುವಿನಿಂದ ರಾಮೋಹಳ್ಳಿಯ ಮೊದಲನೇ ಮೈಲಿಗಲ್ಲು ಮಾರ್ಗವಾಗಿ ಲಕ್ಷ್ಮೀಪುರ, ಕೋಲೂರು. | 8.50 |
| 3. | ಹುಲವೇನಹಳ್ಳಿಯಿಂದ ಎಸ್. ಗೊಲ್ಲಹಳ್ಳಿ ಕುರುಬರಪಾಳ್ಯ ಸೊಲುವಾರ ಮಾರ್ಗವಾಗಿ | 3.80 |
| 4. | ಮಂಚನಬೆಲೆ ಡ್ಯಾಂ ನಿಂದ ಚಂದ್ರಪ್ಪ ಸರ್ಕಲ್ | 7.50 |
| 5. | ಬೆಂ. ಮೈ.ರಸ್ತೆಯಿಂದ ಚುಂಚನಕುಪ್ಪೆಯಿಂದ, ಪೆದ್ದನಪಾಳ್ಯ ಮತ್ತು ಮುದ್ದನಪಾಳ್ಯ ಮಾರ್ಗವಾಗಿ | 6.30 |
| | **ಒಟ್ಟು** | **34.60** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 254

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಆರ್ಥಿಕ ಸಚಿವಾಲಯ

**ವಿಷಯ:** ಸಮೂಹ-ಎ ವೃಂದದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಟ್ರೈನಿಂಗ್ ರಿಸರ್ವ್ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು ಇದರ ಅಧಿಸೂಚನೆ ಸಂ. E(1)41/2005-06/PSC, ದಿನಾಂಕ: 04.05.2006.

2. ಸರ್ಕಾರದ ಅಧಿಸೂಚನೆ ಸಂ. ಆಇ 89 ವಾತೆಸಿ 2006, ದಿ: 24.06.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು, ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಾವಳಿ 1997ರಡಿಯಲ್ಲಿ ವಾಣಿಜ್ಯ ತೆರಿಗೆ ಇಲಾಖೆಯ ಸಮೂಹ-ಎ ವೃಂದದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗಳಿಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಕಳಿಸಿಕೊಟ್ಟಿತ್ತು. ಸದರಿ ಆಯ್ಕೆ ಪಟ್ಟಿಯನ್ವಯ ಮೇರೆಗೆ ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (2)ರಲ್ಲಿನ ಅಧಿಸೂಚನೆಯಲ್ಲಿ 6 ಮಂದಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರನ್ನು ನೇಮಕಾತಿ ಮಾಡಿ ವಾಣಿಜ್ಯ ತೆರಿಗೆ ಇಲಾಖೆಗೆ ಕಳುಹಿಸಲಾಗಿದೆ. ನೇರನೇಮಕಾತಿ ಕೋಟಾದಡಿ ಬರುವ ಈ ಎಲ್ಲಾ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನದಿಂದ 2 ವರ್ಷಗಳ ಕಾಲ ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಇಲಾಖೆಯು ರೂಪಿಸಿದ ತರಬೇತಿ ಯೋಜನೆ ಪ್ರಕಾರ ವಾಣಿಜ್ಯ ತೆರಿಗೆಗಳ ಇಲಾಖೆಯ ವಿವಿಧ ಭಾಗಗಳಲ್ಲಿ ಇವರುಗಳು ತರಬೇತಿಯನ್ನು ಪಡೆಯಬೇಕಾಗುತ್ತದೆ. ತರಬೇತಿ ಪಡೆದ ನಂತರದಲ್ಲಿಯೇ ಈ ಅಧಿಕಾರಿಗಳು ಇಲಾಖೆಯಲ್ಲಿನ ಹುದ್ದೆಗಳನ್ನು ಸ್ವತಂತ್ರವಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಇವರನ್ನು ಯಾವುದೇ ನಿರ್ದಿಷ್ಟ ಹುದ್ದೆಗೆ ನೇಮಕಾತಿ ಮಾಡದೇ ಇರುವುದರಿಂದ ಇವರಿಗೆ ವೇತನ ಮತ್ತು ಭತ್ಯೆಗಳನ್ನು ಪಡೆಯಲು ಸಾಯವಾಗುವುದಿಲ್ಲ. ಆದುದರಿಂದ, 2 ವರ್ಷಗಳ ಅವಧಿಗೆ 6 ಟ್ರೈನಿಂಗ್ ರಿಸರ್ವ್ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಗಳನ್ನು ಸೃಜಿಸಲು ನಿರ್ಧರಿಸಲಾಗಿದೆ.

ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ವೃಂದದಲ್ಲಿ ಟ್ರೈನಿಂಗ್ ರಿಸರ್ವ್ ಹುದ್ದೆಗಳ ಸಂಬಂಧದಲ್ಲಿ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 40 ಎಸ್‌ಆರ್‌ಎಸ್ 68, ದಿ: 14.5.1968ರ ಅನುಸಾರ ಕ್ರಮವಹಿಸುವಂತೆ ಟಿಪ್ಪಣಿ ಸಂಖ್ಯೆ: ಸಿಆಸುಇ 52587:ಸಿಬ್ಬಂದಿ-1: 2006, ದಿನಾಂಕ: 16.01.2007ರಲ್ಲಿ ಸಿಆಸುಇ (ಸಿಬ್ಬಂದಿ) ವಿಭಾಗವು ತಿಳಿಸಿರುತ್ತದೆ.

ಆದುದರಿಂದ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 89 ವಾತೆಸಿ 2006, ಬೆಂಗಳೂರು, ದಿನಾಂಕ: 27ನೇ ಜನವರಿ 2007**

ಪ್ರಸ್ತಾವನೆಯಲ್ಲಿ ಹೇಳಿರುವ ಕಾರಣಗಳಿಂದ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಸಮೂಹ-ಎ ವೃಂದದಲ್ಲಿ ದಿನಾಂಕ: 24.6.2006 ರಿಂದ ಜಾರಿಗೆ ಬರುವಂತೆ 6 ಟ್ರೈನಿಂಗ್ ರಿಸರ್ವ್ ಹುದ್ದೆಗಳನ್ನು 2 ವರ್ಷಗಳ ಅವಧಿಗೆ ಸೃಜಿಸಲಾಗಿದೆ.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 40 ಎಸ್‌ಆರ್‌ಎಸ್ 68, ದಿನಾಂಕ: 14.5.1968ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ದತ್ತವಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೆಹಬೂಬ್ ಖಾನ್**

ಪಿ.ಆರ್. 144

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಆರ್ಥಿಕ ಇಲಾಖೆ (ವಾ.ತೆ-2).

## ಕಂದಾಯ ಸಚಿವಾಲಯ

**ವಿಷಯ:–** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನಂದಾವರದಲ್ಲಿರುವ ಶ್ರೀ ವಿನಾಯಕ ಶಂಕರನಾರಾಯಣ ದುರ್ಗಾಂಭ ಕ್ಷೇತ್ರಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:–** ಧಾರ್ಮಿಕ ದತ್ತಿ ಆಯುಕ್ತರ ದಿನಾಂಕ:01/02/2007ರ ಸಂ.ಎಡಿಎಂ/8/ಸಿಆರ್/58/2006–07ರ ಪತ್ರ

**ಪ್ರಸ್ತಾವನೆ:–**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ:01/02/2007ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನಂದಾವರದಲ್ಲಿರುವ ಶ್ರೀ ವಿನಾಯಕ ಶಂಕರನಾರಾಯಣ ದುರ್ಗಾಂಭ ಕ್ಷೇತ್ರದ ಆಡಳಿತ ಮೊಕ್ತೇಸರರಾದ ಶ್ರೀ ಎ.ಸಿ. ಭಂಡಾರಿಯವರು ಅವರ ಆಡಳಿತದ ಅವಧಿಯಲ್ಲಿ ದೇವಾಲಯದ ಬ್ರಹ್ಮ ಕಳಸ ಹಾಗೂ ಜೀರ್ಣೋದ್ಧಾರ ಕಾಮಗಾರಿಗಳಲ್ಲಿ ಹಣ ದುರುಪಯೋಗ, ಆಡಳಿತ ದುರುಪಯೋಗ ಹಾಗೂ ಇತರೇ ಅವ್ಯವಹಾರಗಳನ್ನು ನಡೆಸಿರುವ ಬಗ್ಗೆ ಧಾರ್ಮಿಕ ದತ್ತಿ ಇಲಾಖೆಯ ಸಹಾಯಕ ಆಯುಕ್ತರು ಜೀರ್ಣೋದ್ಧಾರ ಸಮಿತಿಯ ಲೆಕ್ಕ ಪತ್ರಗಳನ್ನು ಹಾಗೂ ದೇವಾಲಯದ ಲೆಕ್ಕ ಪತ್ರಗಳನ್ನು ಆಡಿಟ್ ಮಾಡಿ, ವರದಿ ಸಲ್ಲಿಸಲು ಸಹಾಯಕ ನಿಯಂತ್ರಕರು, ಲೆಕ್ಕ ಪರಿಶೋಧನಾ ವರ್ತುಲ, ಮಂಗಳೂರು ಇವರಿಗೆ ಕೋರಿಕೆ ಸಲ್ಲಿಸಿರುತ್ತಾರೆ. ಲೆಕ್ಕಪರಿಶೋಧನಾ ವರದಿಯನ್ವಯ ದೇವಾಲಯ ಆಡಳಿತ ಮಂಡಳಿಯ ಮೇಲೆ ಗುರುತರವಾದ ಆರೋಪಗಳು ಇರುವ ಹಿನ್ನೆಲೆಯಲ್ಲಿ ಮತ್ತು ಬಹುತೇಕ ಆರೋಪಗಳು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಈಗಿನ ಆಡಳಿತ ಮಂಡಳಿಯನ್ನು ಬರಖಾಸ್ತುಗೊಳಿಸಿ, ದೇವಸ್ಥಾನದ ದೈನಂದಿನ ಆಡಳಿತ ವ್ಯವಹಾರಗಳನ್ನು ಸುಗಮವಾಗಿ ನೋಡಿಕೊಳ್ಳಲು ಆಡಳಿತಾಧಿಕಾರಿಯನ್ನು ನೇಮಿಸುವಂತೆ ಜಿಲ್ಲಾಧಿಕಾರಿಯವರು ಕೋರಿರುತ್ತಾರೆ ಎಂದು ವರದಿ ಮಾಡಿರುತ್ತಾರೆ.

ದೇವಸ್ಥಾನದ ಆಡಳಿತ ಮಂಡಳಿಯ ಕಾರ್ಯನಿರ್ವಹಣೆ ಕುರಿತು ತನಿಖಾ ವರದಿಯಂತೆ ದೇವಾಲಯದ ಆಡಳಿತ ಮಂಡಳಿಯ ವಿರುದ್ಧ ಗುರುತರ ಆರೋಪಗಳು ಬಂದಿರುವ ಹಿನ್ನೆಲೆಯಲ್ಲಿ ಹಾಗೂ ಬಹುತೇಕ ಆರೋಪಗಳು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಆಡಳಿತ ಮಂಡಳಿಯನ್ನು ವಿಚಾರಣಾ ಪೂರ್ವಭಾವಿಯಾಗಿ ಅಮಾನತ್ತಿನಲ್ಲಿರಿಸಬಾರದೇಕೆ ಎಂಬ ಬಗ್ಗೆ ಸಮಜಾಯಿಷಿಯನ್ನು ಸಲ್ಲಿಸಲು ದೇವಸ್ಥಾನದ ಆಡಳಿತ ಮೊಕ್ತೇಸರರಾದ ಶ್ರೀ ಎ.ಸಿ. ಭಂಡಾರಿಯವರಿಗೆ ದಿನಾಂಕ:10/01/2007 ರಂದು ಕಾರಣ ಕೇಳುವ ನೋಟೀಸನ್ನು ತನಿಖಾ ವರದಿಯೊಂದಿಗೆ ಜಾರಿ ಮಾಡಲಾಗಿದ್ದು, ಈ ಕಾರಣ ಕೇಳುವ ನೋಟೀಸಿಗೆ ಆಡಳಿತ ಮೊಕ್ತೇಸರರು ದಿನಾಂಕ:17/01/2007ರಲ್ಲಿ ಸಮಜಾಯಿಷಿಯನ್ನು ಸಲ್ಲಿಸಿದ್ದಾರೆ. ಈ ಸಮಜಾಯಿಷಿಯು ಸಕಾರಣಗಳಿಂದ ಕೂಡಿರುವುದಿಲ್ಲ.

ಈ ಕುರಿತು ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರು ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನಂದಾವರದಲ್ಲಿರುವ ಶ್ರೀ ವಿನಾಯಕ ಶಂಕರನಾರಾಯಣ ದುರ್ಗಾಂಭ ಕ್ಷೇತ್ರದ ದೇವಸ್ಥಾನಕ್ಕೆ 8 ಜನ ಸದಸ್ಯರನ್ನೊಳಗೊಂಡ ಆಡಳಿತ ಮಂಡಳಿಯನ್ನು ಜಿಲ್ಲಾಧಿಕಾರಿಗಳು ತಮ್ಮ ಕಛೇರಿಯ ಆದೇಶ ಸಂಖ್ಯೆ: ಡಿಎಸ್:ಇಎಸ್‌ಟಿ(2):ಸಿಆರ್174/2002–03, ದಿನಾಂಕ:4/2/2003ರಲ್ಲಿ ದಿನಾಂಕ:10/11/2002ರಿಂದ ಅನ್ವಯವಾಗುವಂತೆ 5 ವರ್ಷಗಳ ಅವಧಿಗೆ ರಚಿಸಲಾಗಿದ್ದು, ಆ ಪ್ರಕಾರ ಆಡಳಿತ ಮಂಡಳಿಯ ಅವಧಿಯು ದಿನಾಂಕ:9/11/2007ರವರೆಗೆ ಜಾರಿಯಲ್ಲಿರುತ್ತದೆಂದು ತಿಳಿಸುತ್ತಾ, ಸದರಿ ದೇವಸ್ಥಾನದ ಆಡಳಿತ ಹಿತದೃಷ್ಟಿಯಿಂದ ಈಗಿನ ಆಡಳಿತ ಮಂಡಳಿಯನ್ನು ವಜಾಗೊಳಿಸಿ ದೇವಾಲಯದ ದೈನಂದಿನ ಆಡಳಿತ ನಿರ್ವಹಣೆಗಾಗಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ವರದಿ ಮಾಡಿರುತ್ತಾರೆ. ಜಿಲ್ಲಾಧಿಕಾರಿಗಳ ವರದಿಯನ್ವಯ ಸದರಿ ದೇವಸ್ಥಾನಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 06 ಮುಸರ 2007, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನಂದಾವರದಲ್ಲಿರುವ ಶ್ರೀ ವಿನಾಯಕ ಶಂಕರನಾರಾಯಣ ದುರ್ಗಾಂಭ ದೇವಸ್ಥಾನದ ಆಡಳಿತ ಮೊಕ್ತೇಸರರಾದ ಶ್ರೀ ಎ.ಸಿ. ಭಂಡಾರಿಯವರ ಆಡಳಿತಾವಧಿಯಲ್ಲಿ ನಡೆದ ಸದರಿ ದೇವಸ್ಥಾನದ ಬ್ರಹ್ಮ ಕಲಶ ಹಾಗೂ ಜೀರ್ಣೋದ್ಧಾರ ಕಾಮಗಾರಿಗಳಲ್ಲಿ ಹಣದ ದುರುಪಯೋಗ, ಆಡಳಿತದ ದುರುಪಯೋಗ ಹಾಗೂ ಅವ್ಯವಹಾರಗಳನ್ನು ನಡೆಸಿರುವುದು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ, ಆರೋಪಗಳ ಕುರಿತು ವಿವರವಾದ ವಿಚಾರಣೆಯನ್ನು ಬಾಕಿಯಿಟ್ಟು ಈ ದೇವಸ್ಥಾನದ ಆಡಳಿತ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಸದರಿ ದೇವಸ್ಥಾನದ ಆಡಳಿತ ಸುಸೂತ್ರವಾಗಿ ನಡೆಯುವ ಹಿತದೃಷ್ಟಿಯಿಂದ ದೇವಸ್ಥಾನದ ಆಡಳಿತಾಧಿಕಾರಿಯನ್ನಾಗಿ ಉಪ ನಿಬಂಧಕರು, ಸಹಕಾರ ಇಲಾಖೆ, ಮಂಗಳೂರು (DRCS, Mangalore) ಅವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ರಾಮಚಂದ್ರಯ್ಯ**

ಪಿ.ಆರ್. 301

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕೊಡಗು ಜಿಲ್ಲೆಯ ಕಲ್ಲಹಳ್ಳಿ ವನ್ಯಜೀವಿ ಅರಣ್ಯ ವಲಯದಲ್ಲಿ ಅರಣ್ಯ ಇಲಾಖಾ ಸಿಬ್ಬಂದಿಯವರು ಗುಂಡು ಹಾರಿಸಿರುವ ಬಗ್ಗೆ.

**ಓದಲಾಗಿದೆ:**

1. ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ: ಎಂಎಜಿ/232/05-06, ದಿನಾಂಕ: 7.2.06.
2. ಪ್ರದಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಪತ್ರ ಸಂಖ್ಯೆ:ಬಿ3/ಸಿಬ್ಬಂದಿ/ಸಿಆರ್-57/06-07, ದಿನಾಂಕ: 1.9.06.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ: 7.2.06ರ ಪತ್ರದಲ್ಲಿ ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಗಳು ತಮ್ಮ ಪತ್ರದಲ್ಲಿ ವಿರಾಜಪೇಟೆ ತಾಲ್ಲೂಕು ಕಲ್ಲಹಳ್ಳಿ, ವನ್ಯಜೀವಿ ಅರಣ್ಯ ವಲಯದಲ್ಲಿ ದಿನಾಂಕ: 13.9.05ರಂದು ಅರಣ್ಯ ಸಿಬ್ಬಂದಿಗಳು ಬೇಟೆಗಾರರ ಮೇಲೆ ಗುಂಡು ಹಾರಿಸಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಎಹೆಚ್‌ಎಫ್‌ಎಫ್/30/ಎಫ್‌ಎಸ್‌ಡಬ್ಲ್ಯು/88, ದಿನಾಂಕ: 20.9.91ರಂತೆ ನ್ಯಾಯಾಂಗ ತನಿಖೆ ನಡೆಸಲು ವಿರಾಜಪೇಟೆ ತಾಲ್ಲೂಕಿನ ತಾಲ್ಲೂಕು ದಂಡಾಧಿಕಾರಿಗನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದು, ಅದರಂತೆ ತಾಲ್ಲೂಕು ದಂಡಾಧಿಕಾರಿಗಳು ನ್ಯಾಯಾಂಗ ತನಿಖೆ ನಡೆಸಿ ಈ ಕೆಳಗಿನಂತೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

1. ಕಲ್ಲಹಳ್ಳಿ ವನ್ಯಜೀವಿ ಅರಣ್ಯ ಪ್ರದೇಶಕ್ಕೆ ತಿಮ್ಮ ಮತ್ತು ಇತರ ಆರು ಮಂದಿ ಕ್ರಮ ಪ್ರವೇಶ ಮಾಡಿರುವುದು ನಿಯಮಗಳ ಪ್ರಕಾರ ಅಪರಾಧವಾಗಿದ್ದು ಅವರುಗಳ ಕೈಯಲ್ಲಿ ಕತ್ತಿಗಳು ಇದ್ದು ಕಾಡು ಪ್ರಾಣಿಗಳನ್ನು ಬೇಟೆಯಾಡಲು ಬಂದವರೆಂದು ತಿಳಿದು ಅರಣ್ಯ ಇಲಾಖೆಯ ಸಿಬ್ಬಂದಿಗಳು ಗುಂಡು ಹಾರಿಸಲು ಕಾರಣವಾಗಿರುತ್ತದೆ.

2. ಅರಣ್ಯ ಗಸ್ತು ಸಿಬ್ಬಂದಿಗಳು ಗುಂಡು ಹಾರಿಸುವುದನ್ನು ನಿವಾರಿಸಲು ಗಾಳಿಯಲ್ಲಿ ಒಂದು ಸುತ್ತು ಗುಂಡು ಹಾರಿಸಿರುರುದೆಂದು ತಿಳಿಸಿದ್ದು ಗಾಳಿಯಲ್ಲಿ ಗುಂಡು ಹಾರಿಸುವಾಗ ನೆಲದ ಮೇಲಿರುವ ವ್ಯಕ್ತಿಗೆ ಗುಂಡು ತಾಗಿರುವುದೆಂದು ಹೇಳುವುದು ಒಪ್ಪಕ್ಕದಲ್ಲ. ಇಧರಿಂದ ಅರಣ್ಯ ಗಸ್ತು ಸಿಬ್ಬಂದಿಗಳು ಮುಂಜಾಗ್ರತಾ ಕ್ರಮ ಸಾಕಷ್ಟು ಮಟಟ್ಟಿಗೆ ಕೈಗೊಂಡಿರುವುದು ಕಂಡುಬರುವುದಿಲ್ಲ.

3. ಅರಣ್ಯ ಇಲಾಖೆ ಅಧಿಕಾರಿಗಳು ತಮ್ಮ ಹೇಳಿಕೆಯಲ್ಲಿ ಅರಣ್ಯ ಸಿಬ್ಬಂದಿಗಳು ಮೇಲೆ ಕತ್ತಿಗಳಿಂದ ಹಲ್ಲೆ ನಡೆಸಲು ಪ್ರಯತ್ನಿಸಿದರು ಎಂದು ತಿಳಿಸಿದ್ದರೂ ಯಾವುದೇ ಸಿಬ್ಬಂದಿಗಳಿಗೆ ಹಲ್ಲೆ ಮಾಡಿದ ಬಗ್ಗೆ ಗಾಯಗಳಾಗಲೀ ಅಥವಾ ಇತರೆ ರೀತಿಯ ಜಖಂಗಳಾಗಲೀ ಆಗಿರುವುದು ಕಂಡು ಬರುವುದಿಲ್ಲ. ರಕ್ಷಿತ ಅರಣ್ಯಗಳಲ್ಲಿ ಅಕ್ರಮ ಪ್ರೇಶ ಮಾಡಿದವರಲ್ಲಿ ಕೇವಲ ಕತ್ತಿಗಳು ಮಾತ್ರ ಇದ್ದುದರಿಂದ ಅರರುಗಳನ್ನು ಗುಂಡು ಹಾರಿಸದೆ ಬೇರೆ ರೀತಿಯಲ್ಲಿ ಬಂಧಿಸಬಹುದಾಗಿತ್ತು. ಆದುದರಿಂದ ಗುಂಡು ಹಾರಿಸುವ ಅವಶ್ಯಕತೆ ಇರಲಿಲ್ಲವೆಂದು ಅಭಿಪ್ರಾಯ ಪಡಲಾಗಿದೆ. ಅರಣ್ಯ ಸಿಬ್ಬಂದಿಗಳು ರಡು ಸುತ್ತು ಗುಂಡು ಹಾರಿಸಿರುತ್ತಾರೆಂದು ತಮ್ಮ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಉಲ್ಲೇಖ (2)ರ ತಮ್ಮ ಪತ್ರದಲ್ಲಿ ಅರಣ್ಯ ಸಿಬ್ಬಂದಿಗಳು ದಿನಾಂಕ: 13.9.05 ರಂದು ಕಳ್ಳಬೇಟೆಗಾರರ ಮೇಲೆ ಗುಂಡು ಹಾರಿಸಿ ಸಿಬ್ಬಂದಿಯವರು ಧೈರ್ಯ ಮತ್ತು ಸಾಹಸ ಪ್ರದರ್ಶಿಸಿ, ಅಸಾಧಾರಣಾ ಸನ್ನಿವೇಶನದಲ್ಲಿ ಉಲ್ಬಣಗೊಂಡ ಪರಿಸ್ಥಿತಿಯಲ್ಲಿ ಶಸ್ತ್ರಾಸ್ತ್ರಗಳನ್ನು ಉಪಯೋಗಿಸಲು ಅವಕಾಶ ನೀಡಲಾಗಿರುತ್ತದೆಂದು ಹಾಗೂ ಈ ಪ್ರಕರಣದಲ್ಲಿ ಅಂತಹ ಪರಿಸ್ಥಿತಿ ಉದ್ಭವವಾಗಿದ್ದು, ಇಲಾಖೆಯ ಸಿಬ್ಬಂದಿಯವರು ಈ ಸಾಹಸಕ್ಕೆ ಕೈ ಹಾಕಿರುತ್ತಾರೆ. ಆದ್ದರಿಂದ ಅರಣ್ಯ ಸಂಪತ್ತು ಮತ್ತು ವನ್ಯಜೀವಿ ಸಂಪತ್ತಿನ ರಕ್ಷಣೆ ಹಿತದೃಷ್ಟಿಯಿಂದ, ಈ ಪ್ರಕರಣದಲ್ಲಿ ಸಿಬ್ಬಂದಿಗಳು ತೆಗೆದುಕೊಂಡು ಕ್ರಮವು ಸಮರ್ಥನೀಯ ಕ್ರಮವಾಗಿರುವುದರಿಂದ ಮತ್ತು ಅವರ ಕ್ರಮವು ಕರ್ನಾಟಕ ಅರಣ್ಯ ಅಧಿನಿಯಮದ ಪ್ರಕರಣ 76-ಎ ಯ ಚೌಕಟ್ಟಿನೊಳಗೆ ಇರುವುದೆಂದು ತಮ್ಮ ಅಭಿಪ್ರಾಯವನ್ನು ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಕಳುಹಿಸಿರುವ ವಿಚಾರಣಾ ವರದಿಯನ್ನು ಹಾಗೂ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಅಭಿಪ್ರಾಯಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 266 ಎಫ್‌ಡಬ್ಲ್ಯುಎಲ್ 2006, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಬಲ್ಲಿ ಸರ್ಕಾರವು ಈ ಪ್ರಕರಣದಲ್ಲಿ ಅರಣ್ಯ ಸಂಪತ್ತು ಮತ್ತು ವನ್ಯಜೀವಿ ಸಂಪತ್ತಿನ ರಕ್ಷಣೆಯ ಹಿತದೃಷ್ಟಿಯಿಂದ ಅರಣ್ಯ ರಕ್ಷಕರು ಹಾಗೂ ಸಿಬ್ಬಂದಿಗಳು ತೆಗೆದುಕೊಂಡು ಕ್ರಮವು ಕರ್ನಾಟಕ ಅರಣ್ಯ ಅಧಿನಿಯಮದ ಪ್ರಕರಣ 76-ಎ ರಂತೆ ಚೌಕಟ್ಟಿನಲ್ಲಿರುವುದರಿಂದ ಅರಣ್ಯ ರಕ್ಷಕ ಹಾಗೂ ಸಿಬ್ಬಂದಿಗಳ ಮೇಲೆ ಹೊರಿಸಿರುವ ಆರೋಪಗಳಿಂದ ಅವರನ್ನು ದೋಷಮುಕ್ತಿಗೊಳಿಸಿ ಈ ಪ್ರಕರಣವನ್ನು ಮುಕ್ತಾಯಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಎಂ. ಮಲ್ಲಿಕಾರ್ಜುನ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 309

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆಗೆ 2006-07ನೇ ಸಾಲಿನ ಯೋಜನಾ ಕಾರ್ಯ ಕ್ರಮಗಳ ಅನುಷ್ಠಾನಕ್ಕಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2006, ದಿನಾಂಕ: 27.7.2006.
2. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರ ಪತ್ರ ಸಂಖ್ಯೆ:ಕಸಸಂ/ಸಧ/2006-07/291 ದಿನಾಂಕ: 12.01.2007.

**ಪ್ರಸ್ತಾವನೆ:**

ಕರ್ನಾಟಕ ಸಕ್ಕರೆ ಸಂಸ್ಥೆಯು ಹೊಂದಿರುವ 4 ವಿವಿಧ ಭಾಗಗಳಲ್ಲಿನ 97 ಎಕರೆ ಭೂಮಿಯಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಹಾಗೂ ಮಂಡ್ಯ ಜಿಲ್ಲೆಯ ಸಾತನೂರು ಗ್ರಾಮದಲ್ಲಿ 30 ಎಕರೆ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ಸಂಸ್ಥೆಯ 2ನೇ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿರುವುದಾಗಿ ಹಾಗೂ ಸಕ್ಕರೆ ಕಾರ್ಖಾನೆಯವರಿಗೆ ಮತ್ತು ಕಬ್ಬು ಬೆಳೆಗಾರರಿಗೆ ಪ್ರಾತ್ಯಕ್ಷತೆ ಮತ್ತು ತರಬೇತಿ ನೀಡಲಾಗುವ ದೃಷ್ಟಿಯಿಂದ ಈ ಕೇಂದ್ರದಲ್ಲಿ ಪ್ರಯೋಗ ಶಾಲೆಗಳನ್ನು ನಿರ್ಮಿಸಿ ಅಭಿವದ್ದಿಪಡಿಸುವ ಗುರಿಯನ್ನು ಹಮ್ಮಿಕೊಳ್ಳುವ ದೃಷ್ಟಿಯಿಂದ 2006-07ನೇ ಸಾಲಿನಲ್ಲಿ ಸದರಿ ಸಾಲಿಗೆ ಒದಗಿಸಲಾಗಿರುವ ರೂ. 100.00 ಲಕ್ಷಗಳಲ್ಲಿ ರೂ. 30.00 ಲಕ್ಷಗಳನ್ನು (ರೂಪಾಯಿ ಮೂತ್ತು ಲಕ್ಷಗಳು ಮಾತ್ರ) ಮೇಲೆ ಓದಲಾದ (1)ರ ದಿನಾಂಕ: 27.7.06ರ ಆದೇಶದಲ್ಲಿ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಈಗಾಗಲೇ ಬಿಡುಗಡೆ ಮಾಡಲಾಗಿರುವ ರೂ. 30 ಲಕ್ಷಗಳಲ್ಲಿ ದಿನಾಂಕ: 31.12.06ರವರೆಗೆ 11,69,892/- ರೂಗಳನ್ನು ವೆಚ್ಚ ಮಾಡಿರುವುದಾಗಿ ತಿಳಿಸಿ, ಈ ವರ್ಷ ಸಂಸ್ಥೆಯ ಈ ಕೆಳಕಂಡ ಕಾರ್ಯಕ್ರಮಗಳಿಗೆ 1,04,50,000/- ರೂಗಳ ಅವಶ್ಯಕತೆ ಇದ್ದು, ಬಾಕಿ ಉಳಿದಿರುವ 70.00 ಲಕ್ಷ ರೂಗಳನ್ನು ಒಂದೇ ಕಂತಿನಲ್ಲಿ ಬಿಡುಗಡೆ ಮಾಡಲು ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರ ಮೇಲೆ ಓದಲಾದ (2ರಲ್ಲಿ ಕೋರಿದ್ದಾರೆ.

| | | |
|---|---|---|
| 1) | ಸಾತನೂರು ಫಾರ್ಮ ಮತ್ತು ಬೆಳಗಾವಿ ಫಾರ್ಮನಲ್ಲಿ ಹೊಸತಳಿ ಕಬ್ಬಿನ ಬೀಜ ಅಭಿವೃದ್ಧಿ ಪಡಿಸಲು | 23,50,000/- |
| 2) | ತರಬೇತಿ ಕಾರ್ಯಕ್ರಮಗಳಿಗಾಗಿ | 3,50,000/- |

| | | |
|---|---|---|
| 3) | ತಾಂತ್ರಿಕ ಸಿಬ್ಬಂದಿಗಳಿಗೆ ವೇತನ ಪ್ರವಾಸಭತ್ಯೆ ಹಾಗೂ ಆಡಳಿತಾತ್ಮಕ ವೆಚ್ಚಗಳಿಗೆ ಮುಂದಿನ 3 ತಿಂಗಳಿಗೆ ಪ್ರತಿ ತಿಂಗಳಿಗೆ ರೂ. 2.00 ಲಕ್ಷದಂತೆ. | 6,00,000/- |
| 4) | ಸಂಶೋಧನೆ ಕೆಲಸಗಳನ್ನು ಹಂತಹಂತವಾಗಿ ಅಭಿವೃದ್ಧಿ ಪಡಿಸಲು ಮೊದಲಿನ ಹಂತಕ್ಕೆ ಬೇಕಾಗುವ ಹಣ | 71,50,000/- |
| | **ಒಟ್ಟು ರೂ.** | **1,04,50,000/-** |

ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದರ ನಿರ್ದೇಶಕರು, ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2006, ಬೆಂಗಳೂರು, ದಿನಾಂಕ: 14ನೇ ಫೆಬ್ರವರಿ 2007**

ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ರವರ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದಕ್ಕೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಯೋಜನಾ ಕಾರ್ಯಕ್ರಮಗಳನ್ನು ಪೂರ್ಣಗೊಳಿಸಿದ ನಂತರ ವರದಿಯನ್ನು ಸಲ್ಲಿಸುವ ಷರತ್ತಿಗೆ ಒಳಪಟ್ಟು 2006-07ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852-08-201-0-01 (ಉಪ ಶೀರ್ಷಿಕೆ-106) (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ ರೂ. 100.00 ಲಕ್ಷಗಳಲ್ಲಿ ಬಾಕಿ ಇರುವ 70.00 ಲಕ್ಷ ರೂ.ಗಳನ್ನು (ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಸದರಿ ಹಮವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ: 2.9.2006 ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 310

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀ ಕೆ.ಎನ್. ವೆಂಕಟಸ್ವಾಮಿ, (ದಿವಂಗತ) ದ್ವಿ:ದ:ಸ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ವೈದ್ಯಕೀಯ ವೆಚ್ಚ ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ ಲೆಪ4/25/ವೈವೆ/2004-05 ದಿನಾಂಕ: 8.8.2006.
2. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಎಂಡಿಎ:ಎನ್‌ಡಿ: 1419:06-07 ದಿನಾಂಕ:18.9.2006.

**ಪ್ರಸ್ತಾವನೆ:**

ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ:8.8.2006ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಎರಡನೇ ದರ್ಜೆ ಸಹಾಯಕರಾಗಿದ್ದ ಶ್ರೀ ಕೆ.ಎನ್. ವೆಂಕಟಸ್ವಾಮಿ ಅವರಿಗೆ ದಿನಾಂಕ: 16.6.2006ರಂದು ಬೆಳಗಿನ ಜಾವ ತೀವ್ರ ಅನಾರೋಗ್ಯ ಉಂಟಾಗಿ ಪ್ರಜ್ಞಾಹೀನರಾದ ಕಾರಣ ಅವರ ಮನೆಯ ಸಮೀಪ ಇದ್ದ ಶೇಖರ್ ಆಸ್ಪತ್ರೆಗೆ ತುರ್ತಾಗಿ ದಾಖಲು ಮಾಡಲಾಯಿತೆಂದು, ಸದರಿ ಆಸ್ಪತ್ರೆಯಲ್ಲಿ 2.7.2006ರವರೆಗೆ ಒಳರೋಗಿಯಾಗಿದ್ದ ಅವರು ದಿನಾಂಕ: 2.7.2006 ರಂದು ಆಸ್ಪತ್ರೆಯಲ್ಲಿ ನಿಧನರಾದರೆಂದು. ವರ ಚಿಕಿತ್ಸೆಗಾಗಿ ರೂ.1,73,000/-ಗಳನ್ನು ವೆಚ್ಚ ಮಾಡಲಾಯಿತೆಂದು ತಿಳಿಸಿ ಸದರಿ ಶೇಖರ್ ಆಸ್ಪತ್ರೆಯು ಮೆಡಿಕಲ್ ಅಟೆಂಡೆನ್ಸ್ ನಿಯಮಗಳ ಅಡಿಯಲ್ಲಿ ಮಾನ್ಯ ಮಾಡಿರುವ ಆಸ್ಪತ್ರೆ ಆಗಿಲ್ಲದಿರುವ ಕಾರಣ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ದಿವಂಗತ ಕೆ.ಎನ್. ವೆಂಕಟಸ್ವಾಮಿ ಅವರ ಪತ್ನಿಗೆ ವೆಚ್ಚವಾದ ರೂ.1,73,000/-ಗಳನ್ನು ಹಿಂಪಾವತಿ ಮಾಡುವಂತೆ ಕೋರಿದ್ದಾರೆ. ಈ ಬಗ್ಗೆ ಸಂಪರ್ಕಿಸಲ್ಪಟ್ಟ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ದಿನಾಂಕ: 18.9.2006ರ ಪತ್ರದಲ್ಲಿ ಸರ್ಕಾರವು ಕರ್ನಾಟಕ ಮೆಡಿಕಲ್ ಅಟೆಂಡೆನ್ಸ್ ನಿಯಮಗಳ ನಿಯಮ 31ರಡಿಯಲ್ಲಿ ವಿಶೇಷ ಪ್ರಕರಣವೆಂದು ಪರಿಗಣಿಸಿದಲ್ಲಿ ರೂ.91,296-ಗಳ ಮರುಪಾವತಿಗೆ ಅವಕಾಶವಿರುವುದೆಂದು ತಿಳಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 85 ಕಸನಿ 2006, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2007**

ಕರ್ನಾಟಕ ಸರ್ಕಾರಿ ನೌಕರರ (ಮೆಡಿಕಲ್ ಅಟೆಂಡೆನ್ಸ್) ನಿಯಮಾವಳಿ 1963ರ ನಿಯಮ 31ರಡಿಯಲ್ಲಿ ದಿವಂಗತ ಕೆ.ಎನ್. ವೆಂಕಟಸ್ವಾಮಿ, ದ್ವಿತಿಯ ದರ್ಜೆ ಸಹಾಯಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ರೂ.91,296/-ಗಳನ್ನು (ರೂಪಾಯಿ ತೊಂಭತ್ತೊಂದು ಸಾವಿರದ ಇನ್ನೂರ ತೊಂಬತ್ತಾರು ಮಾತ್ರ) ಅವರ ಪತ್ನಿಗೆ ವೈದ್ಯಕೀಯ ವೆಚ್ಚವಾಗಿ ಮರುಪಾವತಿಸಬೇಕೆಂದು ಈ ಮೂಲಕ ಆದೇಶಿಸಿದೆ.

ಸಿ.ಆ.ಸು.ಇಲಾಖೆ (ಸೇವಾ ನಿಯಮಗಳು)ಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 1002 ಸೇನಿಎಫ್ 2006 ದಿನಾಂಕ:30.10.2006ರಲ್ಲಿ ಮತ್ತು ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 2140 ವೆಚ್ಚ-5:2006 ದಿನಾಂಕ: 12.12.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಜ್**

ಪಿ.ಆರ್. 311

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿ ಉನ್ನತೀಕರಿಸಲಾದ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 03 ಜಿಐಇ 2007, ದಿನಾಂಕ: 22.01.2007.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 99. ದಿನಾಂಕ: 20.1.2000 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿನ ಶಾಖಾಧಿಕಾರಿ ಹುದ್ದೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿದ್ದು, ಈ ಹುದ್ದೆಯ ಅವಧಿಯು ದಿನಾಂಕ: 20.1.2007ಕ್ಕೆ ಕೊನೆಗೊಂಡಿದೆ ಎಂದು ಹಾಗೂ ಸದರಿ ಹುದ್ದೆಯು ಅತ್ಯಂತ ಅಗತ್ಯವಾಗಿರುವುದರಿಂದ ಈ ಹುದ್ದೆಯನ್ನು ದಿನಾಂಕ: 21.1.2007 ರಿಂದ ಒಂದು ವರ್ಷದ ಅವಧಿಗೆ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆ ಎಂದು ಮುಂದುವರೆಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 99 ಸಸಿವಿ 2006, ಬೆಂಗಳೂರು, ದಿನಾಂಕ: 14ನೇ ಫೆಬ್ರರಿ 2007**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 99, ದಿನಾಂಕ: 20.1.2000 ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಆರ್ಥಿಕ ಇಲಾಖೆಯ ಗಣಕೀಕರಣ ವಿಭಾಗದಲ್ಲಿನ ಉನ್ನತೀಕರಿಸಿದ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 21.1.2007 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 312

## ENERGY SECRETARIAT
## ADDENDUM
**N: EN 49 NCE 2007, Bangalore, Dated: 14th February 2007**

In Governmen Order No: EN 243 NCE 2005 dated: 14.9.2005 and the Agreement dated: 28.10.2005. The following Lakkihalli village Survey number-162 with an extent of 4.02 Ha to be replaced and read as:-

**"Lakkihalli village-Survey number: 162, Extent: 1.35 Ha and Goolihosahalli village-Survey number: 26, Extent: 2.67 Ha"**

with immediate effect.

By Order and in the name of the Governor of Karnataka,
**SURESH.B. KRISHNAPPANAVAR**
Under Secretary to Government,
Energy Department.

P.R. 313

**Sub :** Enhancement of installed Bagassee based Co-generation Power Plant capacity from 16 MW to 32 MW in favour of M/s Nirani Sugars Limited-reg.

**Read :** 1. Government Order No : DE 22 NCE 2003 dated : 13.10.2003.
2. Letter No : KRED/04/NSL/07/161, dated : 16.1.2007 received from the Managing Director, Karnataka Renewable Energy Development Limited, Bangalore.

**PREAMBLE** : -

In the Government order dated: 13.10.2003 read at (1) above, "in principal clearance" was given to M/s Nirani Sugars Limited for setting up 16 MW (Gross) and 1 MW (exportable) Bagassee Based Co-generation Power Plant at Kulali Cross, Jamakhandi Road, Mudhol, Bagalkot District.

The Managing Director, Karnataka Renewable Energy Development Limited, Bangalore, in his letter read at (2) above has recommended to enhance the installed Bagassee based Co-generation Power Plant capacity from 16 MW (Gross) and 11 MW (exportable) to 32 MW (Gross) and 22 MW (exportable) in favour of M/s Nirani Sugars Limited at Kulali Cross, Jamakhandi Road, Mudhol, Bagalkot District.

The proposal has been examined at Government level and hence the following order :-

**Government Order No : EN 35 NCE 2007, Bangalore, Dated : 7th February 2007.**

Government is pleased to accord sanction for the enhancement of the installed Bagasee based Co-operation Power Plant capacity from 16 MW (Gross) and 11 MW (exportable) to 32 MW (Gross) and

22 MW (exportable) in favour of M/s Nirani Sugars Limited at Kulali Cross, Jamakhandi Road, Mudhol, Bagalkot District.

The other terms and conditions of the Government Order read at (1) above shall **IPSOFACTO** applicable.

By Order and in the Name of the Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 314

**Sub :** Enhancement of allotted capacity of Wind Power Project from 5.00 MW to 8.00 in favour of M/s ARC Power Generation Limited-reg.

**Read :** 1. Government Order No : DE 39 NCE 1997(4) dated : 21.10.1997.
2. Government Order No: DE 124 NCE 1997 dated: 23.7.1999.
3. Letter No : KRED/08/ARC/2007/290, dated : 2.2.2007 received from the Managing Director, Karnataka Renewable Energy Development Limited, Bangalore.

**PREAMBLE** : -

In the Government order read at (1) above the sanction has been accorded for implementation of 5.00 MW capacity Wind Power Project at Horatti village of Bijapur District to M/s ARC Power Generation Limted.

In the Government Order read at (2) above permission has been accorded of the change of the location of the project from Horatti village of Bijapur District to Ganjikatte Village of Chitradurga District.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (3) above has recommended to Government to enhance the alloted wind power capacity from 5.00 MW to 8.00 MW at Ganjikatte Village of Chitradurga District in favour of M/s ARC Power Generation Limited.

The proposal has been examined at the Government level and hence the order :-

**Government Order No : EN 42 NCE 2007, Bangalore, Dated : 15th February 2007.**

Government accords approval for enhancement of wind power capacity from 5.00 MW to 8.00 MW in favour of M/s ARC Power Generation Limited at Ganjikatte Vllage of Chitradurga District.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 315

**Sub :** Transfer of 1.65 MW Wind Power Capacity in favour of M/s Walden Properties Private Limited-reg.

**Read :** 1. Government Order No : DE 247 NCE 2002 dated : 5.3.2003.
2. Government Order No: EN 409 NCE 2006 dated: 18.10.2006.
3. Government Order No: EN 463 NCE 2006 dated: 26.12.2006.
4. Letter No: KRED/08/WPPL/2007/286, dated : 2.2.2007 received from the Managing Director, Karnataka Renewable Energy Development Limited, Bangalore.

**PREAMBLE** : -

In the Government Order dated: 5.3.2003 read at (1) above permission has been accorded to implement 5.00 MW capacity Wind Power Project at Devanakatti Village, Belgaum District to M/s NEG Micon (India) Private Limited.

In the Government Order dated: 18.10.2006 read at (2) above permission has been accorded for the enhancement of wind power capacity rom 5.00 MW to 9.9 MW.

In the Government Order dated : 22.12.2006 read at (3) above the approval has been accorded for the change of company's name from M/s NEG Micon (India) Private Limited to M/s Vestas Wind Technology India Private Limited.

Now, the Managing Director, Karnataka Renewable Energy Development Limited, Bangalre in his letter dated: 8.2.2007 read at (4) above has recommended to the Government for transfer of 1.65 MW Wind Power capacity at Devanakatti Village, Belgaum District in favour of M/s Walden Properties Private Limited from out of sactioned capacity of 9.9 MW Wind Power Capacity from M/s Vestas Wind Technology India Private Limited.

The proposal has been examined at Government level and hence the order :-

**Government Order No : EN 45 NCE 2007, Bangalore, Dated : 15th February 2007**

Government accords approval for transfer of 1.65 MW Wind Power capacity at Devanakatti Village, Belgaum District in favour of M/s Walden Properties Private Limited from out of sanctioned capacity of 9.9 MW Wind Power Capacity from M/s Vestas Wind Technology India Private Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,
**SURESH.B.KRISHNAPPANAVAR**
Under Secretary to Government,
Energy Department.

P.R. 316

**Sub :** Transfer of 4.95 MW Wind Power Capacity in favour of M/s Mgma Leasing Limited-reg.

**Read :** 1. Government Order No : DE 247 NCE 2002 dated : 5.3.2003.
2. Government Order No: EN 409 NCE 2006 dated: 18.10.2006.
3. Government Order No: EN 463 NCE 2006 dated: 26.12.2006.
4. Letter No: KRED/08/ML/2007/348, dated : 8.2.2007 received from the Managing Director, Karnataka Renewable Energy Development Limited, Bangalore.

**PREAMBLE** : -

In the Government Order dated: 5.3.2003 read at (1) above permission has been accorded to implement 5.00 MW capacity Wind Power Project at Devanakatti Village, Belgaum District to M/s NEG Micon (India) Private Limited.

In the Government Order dated: 18.10.2006 read at (2) above permission has been accorded for the enhancement of wind power capacity from 5.00 MW to 9.9 MW.

In the Government Order dated : 22.12.2006 read at (3) above the approval has been accorded for the change of company's name from M/s NEG Micon (India) Private Limited to M/s Vestas Wind Technology India Private Limited.

Now, the Managing Director, Karnataka Renewable Energy Development Limited, Bangalre in his letter dated: 8.2.2007 read at (4) above has recommended to the Government for transfer of 4.95 MW Wind Power capacity at Devanakatti Village, Belgaum District in favour of M/s Magma Leasing Limited from out of sactioned capacity of 9.9 MW Wind Power Capacity from M/s Vestas Wind Technology India Private Limited.

The proposal has been examined at Government level and hence the following order :-

**Government Order No : EN 47 NCE 2007, Bangalore, Dated : 15th February 2007**

Government accords approval for transfer of 4.95 MW Wind Power capacity at Devanakatti Village, Belgaum District in favour of M/s Magma Leasing Limited from out of sanctioned capacity of 9.9 MW Wind Power Capacity from M/s Vestas Wind Technology India Private Limited.

The terms and conditions of the Government Order read at (1) abve shall **IPSO FACTO** applicable.

By Order and in the Name of the Governor of Karnataka,
**SURESH.B.KRISHNAPPANAVAR**
Under Secretary to Government, Energy Department.

P.R. 317

## FOREST, ECOLOGY & ENVIRONMENT SECRETARIAT

**Sub :** Survey and demarcation of lands constituted as Forest Reserves in Chikmagalur District under Section 71 of Karnataka Land Revenue Act, 1964 by the Deputy Commissioner, Chikmagalur District– reg.

**Read :**
1) Notification dated 05-06-2002 issued by the Deputy Commissioner, Chikmagalur District, Chikmagalur.
2) Government Order No. RD 29 LGU 2002 dated 03-07-2002.
3) Discussion in the meeting held on 24-08-2006, chaired by the Chief Secretary to Government of Karnataka, Bangalore.
4) Letter No. A5 (4) GFL.CR.6/06-07 dated 1 / 2 –09-2006 of the Principal Chief Conservator of Forests, Bangalore.

**Preamble:**

The Deputy Commissioner, Chikmagalur District, Chikmagalur in Notification cited at (1) above had notified 1,38,258.19 acres (approximate 55,000 ha.) of wooded lands as "Forest Reserves" under the provisions of Section 71 of Karnataka Land Revenue Act, 1964 in 5 Taluks of Chikmagalur District viz., Koppa, N.R. Pura (Narasimharajapura), Sringeri, Mudigere and Chikmagalur.

Government of Karnataka in Order read at (2) above examined the issue and issued directions to the Deputy Commissioner, Chikmagalur to exclude 10,000 ha. under occupation by schools, hospitals

